आखण्डलः सहस्राक्षः ऋभुक्षास्तस्य तु प्रिया ।
पुलोमजा शचीन्द्राणी नगरी त्वमरावती ॥ ४६ ॥

ಆಖಂಡಲಃ ಸಹಸ್ರಾಕ್ಷಃ ಋಭುಕ್ಷಾಸ್ತಸ್ಯ ತು ಪ್ರಿಯಾ ।
ಪುಲೋಮಜಾ ಶಚೀಂದ್ರಾಣೀ ನಗರೀ ತ್ವಮರಾವತೀ ॥ ೪೬ ॥

हय उच्चैःश्रवाः सूतो मातलिर्नन्दनं वनम् ।
स्यात्प्रासादो वैजयन्तो जयन्तः पाकशासनिः ॥ ४७ ॥

ಹಯ ಉಚ್ಚೈಃಶ್ರವಾಃ ಸೂತೋ ಮಾತಲಿರ್ನಂದನಂ ವನಮ್ ।
ಸ್ಯಾತ್ಪ್ರಾಸಾದೋ ವೈಜಯಂತೋ ಜಯಂತಃ ಪಾಕಶಾಸನಿಃ ॥ ೪೭ ॥

---

**पुरुहूतः, पुरंदरः, जिष्णुः, लेखर्षभः, शक्रः, शतमन्युः, दिवस्पतिः, सुत्रामा, गोत्रभित्, वज्री, वासवः, वृत्रहा, वृषा, वास्तोष्पतिः सुरपतिः, बलारातिः, शचीपतिः, जम्भभेदी, हरिहयः, स्वाराट्, नमुचिसूदनः, संक्रन्दनः, दुश्च्यवनः, तुराषाट्, मेघवाहनः, आखण्डलः, सहस्राक्षः, ऋभुक्षाः,** ಈ ೩೫ ಹೆಸರು ಇಂದ್ರನದು (Indra). ಇಲ್ಲಿ **स्वाराट्** ಶಬ್ದವು **जकारान्त**, **तुराषाट्** ಶಬ್ದವು **हकारान्त**, **ऋभुक्षा** ಶಬ್ದವು **पथिन्** ಶಬ್ದದಂತೆ **न** ಕಾರಾಂತವು.

**पुलोमजा, शची, इन्द्राणी** ಈ ೩ ಇಂದ್ರನ ಹೆಂಡತಿಯ ಹೆಸರು (Wife of Indra). **अमरावती** ಆತನ ಪಟ್ಟಣವು (Indra's City).

೪೭. **उच्चैःश्रवाः** ಆತನ ಕುದುರೆ (His horse). **मातलिः** ಆತನ ಸಾರಥಿ (His Charioteer). **नन्दनम्** ಆತನ ತೋಟ. (His Garden). **वैजयन्तः** ಆತನ ಅರಮನೆ (His Palace). **जयन्तः, पाकशासनिः** ಈ ೨ ಆತನ ಮಗನ ಹೆಸರು (His Son).

೪೮-೪೯. **ऐरावतः, अभ्रमातङ्गः, ऐरावणः, अभ्रमुवल्लभः,** ಈ ೪ ಆತನ ಆನೆಯ ಹೆಸರು (His Elephant). **ह्रादिनी, वज्रम्,**

**ऐरावतोऽभ्रमातङ्गैरावणाभ्रमुवल्लभाः ।**
**ह्रादिनी वज्रमस्त्री स्यात्कुलिशं भिदुरं पविः ॥ ४८ ॥**

ಐರಾವತೋಽಭ್ರಮಾತಂಗೈರಾವಣಾಭ್ರಮುವಲ್ಲಭಾಃ ।
ಹ್ರಾದಿನೀ ವಜ್ರಮಸ್ತ್ರೀ ಸ್ಯಾತ್ಕುಲಿಶಂ ಭಿದುರಂ ಪವಿಃ ॥ ೪೮ ॥

**शतकोटिः स्वरुः शम्बो दम्भोलिरशनिर्द्वयोः ।**
**व्योमयानं विमानोऽस्त्री नारदाद्याः सुरर्षयः ॥ ४९ ॥**

ಶತಕೋಟಿಃ ಸ್ವರುಃ ಶಂಬೋ ದಂಭೋಲಿರಶನಿರ್ದ್ವಯೋಃ ।
ವ್ಯೋಮಯಾನಂ ವಿಮಾನೋಽಸ್ತ್ರೀ ನಾರದಾದ್ಯಾಃ ಸುರರ್ಷಯಃ ॥ ೪೯ ॥

**स्यात्सुधर्मा देवसभा पीयूषममृतं सुधा ।**
**मन्दाकिनी वियद्गङ्गा स्वर्णदी सुरदीर्घिका ॥ ५० ॥**

ಸ್ಯಾತ್ಸುಧರ್ಮಾ ದೇವಸಭಾ ಪೀಯೂಷಮಮೃತಂ ಸುಧಾ ।
ಮನ್ದಾಕಿನೀ ವಿಯದ್ಗಂಗಾ ಸ್ವರ್ಣದೀ ಸುರದೀರ್ಘಿಕಾ ॥ ೫೦ ॥

---

**कुलिशम्, भिदुरम्, पविः, शतकोटिः, स्वरुः, शम्बः, दम्भोलिः अशनिः** ಈ ೧೦ ಇಂದ್ರನ ವಜ್ರಾಯುಧಕ್ಕೆ ಹೆಸರು (Thunderbolt). ಇಲ್ಲಿ **ह्रादिनी** ಎಂಬುದು ಸ್ತ್ರೀಲಿಂಗ, **वज्रम्** ಪುನ್ನಪುಂಸಕ ಲಿಂಗ (**अस्त्री** ಎಂದು ಹೇಳಿರುವುದರಿಂದ). **अशनिः** ಎಂಬುದು ಸ್ತ್ರೀಲಿಂಗ ಮತ್ತು ಪುಲ್ಲಿಂಗ (**द्वयोः** ಎಂದು ಹೇಳಿರುವುದರಿಂದ) **व्योमयानम्, विमानः**, ಈ ೨ ಇಂದ್ರನ ರಥದ ಹೆಸರು (His aerial car). ಇಲ್ಲಿ **विमान** ಶಬ್ದವು ಪುಲ್ಲಿಂಗ ಮತ್ತು ನಪುಂಸಕಲಿಂಗ. **सुरर्षयः** ಎಂಬುದು ನಾರದ ಮೊದಲಾದ ಋಷಿಗಳ ಹೆಸರು (Divine sages). **आद्य** ಶಬ್ದದಿಂದ **तुम्बुरु, भरत, पर्वत, असित, देवल** ಮುಂತಾದವರೆಂದು ಗ್ರಹಿಸಬೇಕು.

೫೦. **सुधर्मा, देवसभा** ಈ ೨ ದೇವತೆಗಳ ಸಭೆಗೆ (Council

**मेरुः सुमेरुर्हेमाद्री रत्नसानुः सुरालयः ।**
**पञ्चैते देवतरवः मन्दारः पारिजातकः ॥ ५१ ॥**

ಮೇರುಃ ಸುಮೇರುರ್ಹೇಮಾದ್ರೀ ರತ್ನಸಾನುಃ ಸುರಾಲಯಃ ।
ಪಂಚೈತೇ ದೇವತರವಃ ಮಂದಾರಃ ಪಾರಿಜಾತಕಃ ॥ ೫೧ ॥

**सन्तानः कल्पवृक्षश्च पुंसि वा हरिचन्दनम् ।**
**सनत्कुमारो वैधात्रः स्वर्वैद्यावश्विनीसुतौ ॥ ५२ ॥**

ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚನ್ದನಮ್ ।
ಸನತ್ಕುಮಾರೋ ವೈಧಾತ್ರಃ ಸ್ವರ್ವೈದ್ಯಾವಶ್ವಿನೀಸುತೌ ॥ ೫೨ ॥

**नासत्यावश्विनौ दस्रावाश्विनेयौ च तावुभौ ।**
**स्त्रियां बहुष्वप्सरसः स्वर्वेश्या उर्वशीमुखाः ॥ ५३ ॥**

ನಾಸತ್ಯಾವಶ್ವಿನೌ ದಸ್ರಾವಾಶ್ವಿನೇಯೌ ಚ ತಾವುಭೌ ।
ಸ್ತ್ರಿಯಾಂ ಬಹುಷ್ವಪ್ಸರಸಃ ಸ್ವರ್ವೇಶ್ಯಾ ಉರ್ವಶೀಮುಖಾಃ ॥ ೫೩ ॥

---

of Gods); **पीयूषम्, अमृतम्, सुधा** ಈ ೩ ಅಮೃತಕ್ಕೆ (Nectar, God's food); **मन्दाकिनी, वियद्गङ्गा, स्वर्णदी, सुरदीर्घिका,** ಈ ೪ ಸ್ವರ್ಗಲೋಕದ ಗಂಗಾನದಿಗೆ (The Celestial Ganges) ಹೆಸರುಗಳು.

೫೧-೫೩. **मेरुः, सुमेरुः, हेमाद्रिः, रत्नसानुः, सुरालयः,** ಈ ೫ ಮೇರು ಪರ್ವತಕ್ಕೆ (Mountain Meru); **मन्दारः, पारिजातकः, सन्तानः, कल्पवृक्षः, हरिचन्दनम्** ಈ ೫ ದೇವತೆಗಳ ಕಲ್ಪವೃಕ್ಷಗಳು (The five celestial trees). ಇಲ್ಲಿ '**हरिचन्दनम्**' ಎಂಬ ಶಬ್ದವು ನಪುಂಸಕ ಮತ್ತು ಪುಲ್ಲಿಂಗದಲ್ಲಿಯೂ ಉಂಟು. **सनत्कुमारः, वैधात्रः,** ಈ ೨ ಬ್ರಹ್ಮನ ಪುತ್ರನಾದ ಸನತ್ಕುಮಾರನ ಹೆಸರು (Sanatkumara, Brahma's son).

**(घृताची मेनका रम्भा उर्वशी च तिलोत्तमा ।**
**सुकेशी मञ्जुघोषाद्याः कथ्यन्तेऽप्सरसो बुधैः॥)**

(ಘೃತಾಚೀ ಮೇನಕಾ ರಂಭಾ ಉರ್ವಶೀ ಚ ತಿಲೋತ್ತಮಾ ।
ಸುಕೇಶೀ ಮಂಜುಘೋಷಾದ್ಯಾಃ ಕಥ್ಯನ್ತೇಽಪ್ಸರಸೋ ಬುಧೈಃ ॥)

**हाहा हूहूश्चैवमाद्या गन्धर्वास्त्रिदिवौकसाम् ।**
**अग्निर्वैश्वानरो वह्निर्वीतिहोत्रो धनंजयः ॥ ५४ ॥**

ಹಾಹಾ ಹೂಹೂಶ್ಚೈವಮಾದ್ಯಾ ಗಂಧರ್ವಾಸ್ತ್ರಿದಿವೌಕಸಾಮ್ ।
ಅಗ್ನಿರ್ವೈಶ್ವಾನರೋ ವಹ್ನಿರ್ವೀತಿಹೋತ್ರೋ ಧನಂಜಯಃ ॥ ೫೪ ॥

---

**स्ववैद्यौ, अश्विनीसुतौ, नासत्यौ, अश्विनौ, दस्रौ, आश्विनेयौ** ಈ ೬ ದೇವವೈದ್ಯರಾದ ಅಶ್ವಿನೀಕುಮಾರರು. ಇವರು ಯಾವಾಗಲೂ ಜೋಡಿಯಾಗಿರುವುದರಿಂದ ಈ ಶಬ್ದಗಳು ದ್ವಿವಚನದಲ್ಲಿ ಇರುವುವು (The Asvins or the Celestial Physicians). **अप्सरसः, स्ववेश्याः** ಈ ೨ ದೇವವೇಶ್ಯೆಯರ ಹೆಸರು (Nymphs). ಈ ಶಬ್ದಗಳು ಸ್ತ್ರೀಲಿಂಗ ಬಹುವಚನಾಂತಗಳು. ಮುಂದಿನ ಹೆಚ್ಚಿಗೆ ಶ್ಲೋಕದಲ್ಲಿ ಮುಖ್ಯರಾದ ಅಪ್ಸರಸ್ತ್ರೀಯರ ಹೆಸರುಗಳನ್ನು ಪ್ರತ್ಯೇಕವಾಗಿ ಹೇಳಿದೆ.

೫೪. **हाहाः, हूहूः** ಈ ೨ (ಅಧಾತ್ವನ್ತಸಂಜ್ಞಾವಾಚಕಗಳು) ದೇವಗಾಯಕರ ಹೆಸರುಗಳು (Celestial musicians). **आद्य** ಶಬ್ದದಿಂದ **तुम्बुरु, विश्वावसु, चित्ररथ,** ಮುಂತಾದವರು ಎಂದು ಸೂಚಿತವಾಗುತ್ತದೆ. **हाहा** ಶಬ್ದವು ಆಕಾರಾನ್ತ ಪುಲ್ಲಿಂಗವು. **हाहाः हाहौ हाहाः; हाहां हाहौ हाहान्; हाहा हाहाभ्यां हाहाभिः** ಎಂಬ ರೀತಿಯಲ್ಲಿ ಹೇಳಬೇಕು. ಈ ಶಬ್ದವು **सान्त** ವಾಗಿಯೂ ಸಹ ಪ್ರಯೋಗಿಸಲ್ಪಟ್ಟು '**गन्धर्वोहाहसि प्रोक्तः**' ಎಂದು ಮತ್ತೊಂದು ಕೋಶದಲ್ಲಿ ಹೇಳಿದೆ. **हहाः** ಎಂದು ಆದಿ ಹ್ರಸ್ವವಾಗಿ **हुहुः** ಎಂದು ಉಭಯ ಹ್ರಸ್ವವಾಗಿ '**हहाहुहू**' ಎಂದು ದ್ವಿವಚನಾಂತರೂಪವು ಪ್ರಯೋಗದಲ್ಲಿದೆ. **हूहू** ಶಬ್ದವು

कृपीटयोनिर्ज्वलनो जातवेदास्तनूनपात् ।
बर्हिः शुष्मा कृष्णवर्त्मा शोचिष्केश उषर्बुधः ॥ ५५॥

ಕೃಪೀಟಯೋನಿರ್ಜ್ವಲನೋ ಜಾತವೇದಾಸ್ತನೂನಪಾತ್ ।
ಬರ್ಹಿಃ ಶುಷ್ಮಾ ಕೃಷ್ಣವರ್ತ್ಮಾ ಶೋಚಿಷ್ಕೇಶ ಉಷರ್ಬುಧಃ ॥ ೫೫ ॥

आश्रयाशो बृहद्भानुः कृशानुः पावकोऽनलः ।
रोहिताश्वो वायुसखः शिखावानाशुशुक्षणिः ॥ ५६ ॥

ಆಶ್ರಯಾಶೋ ಬೃಹದ್ಭಾನುಃ ಕೃಶಾನುಃ ಪಾವಕೋಽನಲಃ ।
ರೋಹಿತಾಶ್ವೋ ವಾಯುಸಖಃ ಶಿಖಾವಾನಾಶುಶುಕ್ಷಣಿಃ ॥ ೫೬ ॥

हिरण्यरेता हुतभुग्दहनो हव्यवाहनः ।
सप्तार्चिर्दमुनाः शुक्रश्चित्रभानुर्विभावसुः ॥ ५७ ॥

ಹಿರಣ್ಯರೇತಾ ಹುತಭುಗ್ದಹನೋ ಹವ್ಯವಾಹನಃ ।
ಸಪ್ತಾರ್ಚಿರ್ದಮುನಾಃ ಶುಕ್ರಶ್ಚಿತ್ರಭಾನುರ್ವಿಭಾವಸುಃ ॥ ೫೭ ॥

शुचिरप्पित्तमौर्वस्तु वाडवो वडवानलः ।
वह्नेर्द्वयोर्ज्वालकीलावर्चिर्हेतिः शिखा स्त्रियाम् ॥ ५८ ॥

ಶುಚಿರಪ್ಪಿತ್ತಮೌರ್ವಸ್ತು ವಾಡವೋ ವಡವಾನಲಃ ।
ವಹ್ನೇರ್ದ್ವಯೋರ್ಜ್ವಾಲಕೀಲಾವರ್ಚಿರ್ಹೇತಿಃ ಶಿಖಾ ಸ್ತ್ರಿಯಾಂ ॥ ೫೮ ॥

---

ಊಕಾರಾನ್ತ ಪುಲ್ಲಿಂಗ. **हूहूः हूह्वौ हूह्वः ; हूहूम् हूह्वौ हूहून् ; हूह्वा हूहूभ्यां हूहूभिः** ಇತ್ಯಾದಿ ರೀತಿಯಲ್ಲಿ ಶಬ್ದ ಹೇಳಬೇಕು.

೫೫-೫೮. **अग्निः, वैश्वानरः, वह्निः, वीतिहोत्रः, धनंजयः, कृपीटयोनिः, ज्वलनः, जातवेदाः, तनूनपात्, बर्हिः, शुष्मा, कृष्णवर्त्मा, शोचिष्केशः, उषर्बुधः, आश्रयाशः, बृहद्भानुः, कृशानुः, पावकः, अनलः, रोहिताश्वः, वायुसखः, शिखावान्,**

**त्रिषु स्फुलिङ्गोऽग्निकणः संतापः संज्वरः समौ ।**
**[1](उल्का स्यान्निर्गतज्वाला भूतिर्भसितभस्मनी ।**
**क्षारो रक्षा च दावस्तु दवो वनहुताशनः ॥)**
**धर्मराजः पितृपतिः समवर्ती परेतराट् ॥ ५९ ॥**

ತ್ರಿಷು ಸ್ಫುಲಿಂಗೋಽಗ್ನಿಕಣಃ ಸಂತಾಪಃ ಸಂಜ್ವರಃ ಸಮೌ ।
[1](ಉಲ್ಕಾ ಸ್ಯಾನ್ನಿರ್ಗತಜ್ವಾಲಾ ಭೂತಿರ್ಭಸಿತಭಸ್ಮನೀ ।
ಕ್ಷಾರೋ ರಕ್ಷಾ ಚ ದಾವಸ್ತು ದವೋ ವನಹುತಾಶನಃ ॥
ಧರ್ಮರಾಜಃ ಪಿತೃಪತಿಃ ಸಮವರ್ತೀ ಪರೇತರಾಟ್ ॥ ೫೯ ॥

---

**आशुशुक्षणिः, हिरण्यरेताः, हुतभुक्, दहनः, हव्यवाहनः, सप्तार्चिः, दमुनाः, शुक्रः, चित्रभानुः, विभावसुः, शुचिः, अप्पित्तम्** ಈ ೧೪ ಅಗ್ನಿಯ ಹೆಸರುಗಳು (Fire).

೫೮. **और्वः, वाडवः, वडवानलः,** ಈ ೩ ಬಡಬಾಗ್ನಿಗೆ ಹೆಸರು (Submarine Fire). **ज्वालः, कीलः, अर्चिः, हेतिः, शिखा** ಈ ೫ ಅಗ್ನಿಯ ಜ್ವಾಲೆಗೆ ಹೆಸರು (Flame). **ज्वाला, कीला,** ಎಂದು ಸ್ತ್ರೀಲಿಂಗವೂ ಉಂಟು. **अर्चिः** ಇದಕ್ಕೆ ಸ್ತ್ರೀನಪುಂಸಕಗಳೂ, **हेतिः, शिखा** ಇದಕ್ಕೆ ಸ್ತ್ರೀಲಿಂಗ ಮಾತ್ರ ಎಂದು ತಿಳಿಯಬೇಕು.

೫೯. **स्फुलिङ्गः, अग्निकणः** ಈ ೨ ಪದಗಳಿಗೂ ಕಿಡಿ ಎಂದು ಅರ್ಥ (Spark). **त्रिषु** ಎಂದಿರುವುದರಿಂದ ಈ ಪದಗಳು ೩

---

1. ಈ ಅಧಿಕ ಪಾಠದಲ್ಲಿ 'ಕೊಳ್ಳಿ' (A meteor or a fire-brand) ಎಂಬುದಕ್ಕೆ '**उल्का**' ಎಂದೂ; 'ಬೂದಿ' (Ash) ಎಂಬುದಕ್ಕೆ **भूतिः, भसितम्, भस्म, क्षारः, रक्षा** ಎಂಬ ಐದೂ; 'ಕಾಡುಗಿಚ್ಚು' (Forest-fire) ಎಂಬುದಕ್ಕೆ **दावः, दवः, वनहुताशनः** ಎಂಬ ಮೂರು ಹೆಸರುಗಳೂ ಹೇಳಲ್ಪಟ್ಟಿವೆ.

कृतान्तो यमुनाभ्राता शमनो यमराड्यमः ।
कालो दण्डधरः श्राद्धदेवो वैवस्वतोऽन्तकः ॥ ६० ॥
ಕೃತಾಂತೋ ಯಮುನಾಭ್ರಾತಾ ಶಮನೋ ಯಮರಾಡ್ಯಮಃ ।
ಕಾಲೋ ದಂಡಧರಃ ಶ್ರಾದ್ಧದೇವೋ ವೈವಸ್ವತೋಽನ್ತಕಃ ॥ ೬೦ ॥

राक्षसः कौणपः क्रव्यात्क्रव्यादोऽस्रप आशरः ।
रात्रिंचरो रात्रिचरः कर्बुरो निकषात्मजः ॥ ६१ ॥
ರಾಕ್ಷಸಃ ಕೌಣಪಃ ಕ್ರವ್ಯಾತ್ಕ್ರವ್ಯಾದೋಽಸ್ರಪ ಆಶರಃ ।
ರಾತ್ರಿಂಚರೋ ರಾತ್ರಿಚರಃ ಕರ್ಬುರೋ ನಿಕಷಾತ್ಮಜಃ ॥ ೬೧ ॥

यातुधानः पुण्यजनो नैर्ऋतो यातुरक्षसी ।
प्रचेता वरुणः पाशी यादसांपतिरप्पतिः ॥ ६२ ॥
ಯಾತುಧಾನಃ ಪುಣ್ಯಜನೋ ನೈರ್ಋತೋ ಯಾತುರಕ್ಷಸೀ ।
ಪ್ರಚೇತಾ ವರುಣಃ ಪಾಶೀ ಯಾದಸಾಂಪತಿರಪ್ಪತಿಃ ॥ ೬೨ ॥

---

ಲಿಂಗಗಳಲ್ಲಿಯೂ ಉಂಟು. **संतापः, संज्वरः** ಈ ೨ ಪದಗಳಿಗೆ ಬಿಸಿ ಅಥವಾ ಕಾವು ಎಂದು ಅರ್ಥ (Heat).

೫೯-೬೦. **धर्मराजः, पितृपतिः, समवर्ती, परेतराट्, कृतान्तः, यमुनाभ्राता, शमनः, यमराट्, यमः, कालः, दण्डधरः, श्राद्धदेवः, वैवस्वतः, अन्तकः** ಈ ೧೪ ಯಮನ ಹೆಸರು (Yama).

೬೧-೬೨. **राक्षसः, कौणपः, (कोणपः), क्रव्यात्, क्रव्यादः, अस्रपः, आशरः, रात्रिंचरः, रात्रिचरः, कर्बुरः, निकषात्मजः, यातुधानः, पुण्यजनः, नैर्ऋतः, यातु, रक्षः** ಈ ೧೫ ಪದಗಳಿಗೆ ರಾಕ್ಷಸ ಅಥವಾ ಪಿಶಾಚ (A demon or ghost) ಎಂದರ್ಥ. **यातु, रक्षः** ಎಂಬ ಶಬ್ದಗಳು ನಪುಂಸಕಲಿಂಗ.

**प्रचेताः, वरुणः, पाशी, यादसांपतिः, अप्पतिः,** ಈ ೫ ವರುಣನ ಹೆಸರು (Varuna).

**श्वसनः स्पर्शनो वायुर्मातरिश्वा सदागतिः ।**

**पृषदश्वो गन्धवहो गन्धवाहाऽनिलाऽऽशुगाः॥ ६३ ॥**

ಶ್ವಸನಃ ಸ್ಪರ್ಶನೋ ವಾಯುರ್ಮಾತರಿಶ್ವಾ ಸದಾಗತಿಃ ।
ಪೃಷದಶ್ವೋ ಗಂಧವಹೋ ಗಂಧವಾಹಾಽನಿಲಾಽಽಶುಗಾಃ ॥ ೬೩ ॥

**समीरमारुतमरुज्जगत्प्राणसमीरणाः ।**

**नभस्वद्वातपवनपवमानप्रभञ्जनाः ॥ ६४ ॥**

ಸಮೀರಮಾರುತಮರುಜ್ಜಗತ್ಪ್ರಾಣಸಮೀರಣಾಃ ।
ನಭಸ್ವದ್ವಾತಪವನಪವಮಾನಪ್ರಭಂಜನಾಃ ॥ ೬೪ ॥

**(प्रकम्पनो महावातो झंझावातः सवृष्टिकः ।)**

**प्राणोऽपानः समानश्चोदानव्यानौ च वायवः ।**

(ಪ್ರಕಂಪನೋ ಮಹಾವಾತೋ ಝಂಝಾವಾತಃ ಸವೃಷ್ಟಿಕಃ ।)
ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ಚ ವಾಯವಃ ।

---

೬೩-೬೪. **श्वसनः, स्पर्शनः, वायुः, मातरिश्वा, सदागतिः पृषदश्वः, गन्धवहः, गन्धवाहः, अनिलः, आशुगः, समीरः, मारुतः, मरुत्, जगत्प्राणः, समीरणः, नभस्वान्, वातः, पवनः, पवमानः, प्रभञ्जनः,** ಈ ೨೦ ವಾಯು ಅಥವಾ ಗಾಳಿಗೆ ಹೆಸರು (Air or Wind).

**प्रकम्पनः, महावातः,** ಈ ಎರಡು ಬಿರುಗಾಳಿಗೂ (Whirl-wind), **झंझावातः,** ಎಂಬುದು ಮಳೆಯಿಂದ ಕೂಡಿರುವ ಗಾಳಿಗೂ (Storm with rain) ಹೆಸರು ಎಂದು ಹೆಚ್ಚಿಗೆ ಪಂಙ್ಕ್ತಿಯು.

೬೫-೬೬. **प्राणः, अपानः, समानः, उदानः, व्यानः,** ಇವು ಒಂದೊಂದೂ ಶರೀರದ ಒಂದೊಂದು ಭಾಗದಲ್ಲಿ ಸಂಚರಿಸುವ ವಾಯು ವಿಶೇಷವು. ಮುಂದಿನ ಹೆಚ್ಚಿಗೆ ಪಾಠವು ಇದನ್ನು ವಿಶದಪಡಿಸುವುದು.

[1](हृदि प्राणो गुदेऽपानः समानो नाभिमण्डले ।
उदानः कण्ठदेशे स्यात् व्यानः सर्वशरीरगः ॥)
शरीरस्था इमे रंहस्तरसी तु रयः स्यदः ॥ ६५ ॥

[1](ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಮಂಡಲೇ ।
ಉದಾನಃ ಕಂಠದೇಶೇ ಸ್ಯಾತ್ ವ್ಯಾನಃ ಸರ್ವಶರೀರಗಃ ॥)
ಶರೀರಸ್ಥಾ ಇಮೇ ರಂಹಸ್ತರಸೀ ತು ರಯಃ ಸ್ಯದಃ ॥ ೬೫ ॥

जवोऽथ शीघ्रं त्वरितं लघु क्षिप्रमरं द्रुतम् ।
सत्वरं चपलं तूर्णमविलम्बितमाशु च ॥ ६६ ॥

ಜವೋಽಥ ಶೀಘ್ರಂ ತ್ವರಿತಂ ಲಘು ಕ್ಷಿಪ್ರಮರಂ ದ್ರುತಮ್ ।
ಸತ್ವರಂ ಚಪಲಂ ತೂರ್ಣಮವಿಲಂಬಿತಮಾಶು ಚ ॥ ೬೬ ॥

सततानारताश्रान्तसंतताविरतानिशम् ।
नित्यानवरताजस्रमप्यथातिशयो भरः ॥ ६७ ॥

ಸತತಾನಾರತಾಶ್ರಾನ್ತಸಂತತಾವಿರತಾನಿಶಮ್ ।
ನಿತ್ಯಾನವರತಾಜಸ್ರಮಪ್ಯಥಾತಿಶಯೋ ಭರಃ ॥ ೬೭ ॥

---

**रंहः, तरः, रयः, स्यदः, जवः,** ಈ ೫ ವೇಗಕ್ಕೆ ಹೆಸರು. (ಗಮನದ ವೇಗವನ್ನು ಸೂಚಿಸುತ್ತವೆ.) (Speed or Velocity). **शीघ्रम्, त्वरितम्, लघु, क्षिप्रम्, अरम्, द्रुतम्, सत्वरम्, चपलम्, तूर्णम्, अविलम्बितम्, आशु,** ಈ ೧೧ ಬೇಗನೆ ಎಂದು, (ಕಾಲದ ಅಲ್ಪತ್ವವನ್ನು ಸೂಚಿಸುವ ಪದಗಳು) (Quickly, Swiftly).

೬೭. **सततम्, अनारतम्, अश्रान्तम्, संततम्,**

---

1. ಹೃದಯಸ್ಥಾನದಲ್ಲಿ ಪ್ರಾಣವು, ಗುದಸ್ಥಾನದಲ್ಲಿ ಅಪಾನವು, ಹೊಕ್ಕಳಿನ ಸ್ಥಳದಲ್ಲಿ ಸಮಾನವು, ಕಂಠಸ್ಥಳದಲ್ಲಿ ಉದಾನವು, ಶರೀರದಲ್ಲಿ ಎಲ್ಲಾ ಕಡೆಯೂ ಸಂಚರಿಸುವುದು ವ್ಯಾನವು ಎಂದು ತಿಳಿಯಬೇಕು. (Names given to the five vital airs in different parts of the body).

**अतिवेलभृशात्यर्थातिमात्रोद्गाढनिर्भरम् ।**
**तीव्रैकान्तनितान्तानि गाढबाढदृढानि च ॥ ६८ ॥**

ಅತಿವೇಲಭೃಶಾತ್ಯರ್ಥಾತಿಮಾತ್ರೋದ್ಗಾಢನಿರ್ಭರಮ್ ।
ತೀವ್ರೈಕಾನ್ತನಿತಾನ್ತಾನಿ ಗಾಢಬಾಢದೃಢಾನಿ ಚ ॥ ೬೮ ॥

**क्लीबे शीघ्राद्यसत्त्वे स्यात् त्रिष्वेषां सत्त्वगामि यत् ।**
**कुबेरस्त्र्यम्बकसखो यक्षराड्गुह्यकेश्वरः ॥ ६९ ॥**

ಕ್ಲೀಬೇ ಶೀಘ್ರಾದ್ಯಸತ್ತ್ವೇ ಸ್ಯಾತ್ ತ್ರಿಷ್ವೇಷಾಂ ಸತ್ತ್ವಗಾಮಿ ಯತ್ ।
ಕುಬೇರಸ್ತ್ರ್ಯಂಬಕಸಖೋ ಯಕ್ಷರಾಡ್ಗುಹ್ಯಕೇಶ್ವರಃ ॥ ೬೯ ॥

---

**अविरतम्, अनिशम्, नित्यम्, अनवरतम्, अजस्रम्,** ಈ ೫ ಎಡೆಬಿಡದೆ ಇರುವ ಕಾಲ ಮತ್ತು ಕ್ರಿಯೆಯನ್ನು ಸೂಚಿಸುವ ಪದಗಳು (Continually or eternal).

೬೮. **अतिशयः, भरः, अतिवेलम्, भृशम्, अत्यर्थम्, अतिमात्रम्, उद्गाढम्, निर्भरम्, तीव्रम्, एकान्तम्, नितान्तं, गाढम्, बाढम्, दृढम्,** ಈ ೧೪ ಹೆಚ್ಚು ಅಥವಾ ಅತಿಶಯ ಎಂಬುದನ್ನು (much, excessive) ತಿಳಿಸುತ್ತವೆ. **शीघ्रम्**, ಎಂಬ ಪದದಿಂದ **दृढम्** ಎಂಬ ಪದದವರೆಗೂ ಇರುವ ಶಬ್ದಗಳು ದ್ರವ್ಯವನ್ನು ಬಿಟ್ಟು ಕೇವಲ ಗುಣಕ್ರಿಯಾವಿಶೇಷಣಗಳನ್ನೇ ಸೂಚಿಸುವುದಾದರೆ ನಪುಂಸಕಲಿಂಗವೂ, ದ್ರವ್ಯವೃತ್ತಿಯಾದಲ್ಲಿ ಆ ದ್ರವ್ಯಸೂಚಕಪದವು ಯಾವಲಿಂಗವೋ ಅದೇ ಲಿಂಗವೇ ಆಗಿರುತ್ತವೆ ಎಂದು ತಿಳಿಯಬೇಕು. ಹೇಗೆಂದರೆ **भृशं मूर्खः । भृशं याति । शीघ्रं भुङ्क्ते ।** ಎಂಬಲ್ಲಿ **भृशं, शीघ्रं** ಎಂಬುದು ನಪುಂಸಕಲಿಂಗವಾಗಿರುತ್ತದೆ. **शीघ्रा मतिः, शीघ्रः मृगः, शीघ्रं गमनम्,** ಇವುಗಳಲ್ಲಿ **शीघ्र** ಶಬ್ದವು ವಾಚ್ಯಲಿಂಗವು. **अतिशयः, भरः,** ಇವು ಕೇವಲ ಗುಣಸೂಚಕವೇ ಆಗಿರುವುದರಿಂದ ನಿತ್ಯಪುಲ್ಲಿಂಗವು.

मनुष्यधर्मा धनदो राजराजो धनाधिपः ।
किंनरेशो वैश्रवणः पौलस्त्यो नरवाहनः ॥ ७० ॥

ಮನುಷ್ಯಧರ್ಮಾ ಧನದೋ ರಾಜರಾಜೋ ಧನಾಧಿಪಃ ।
ಕಿಂನರೇಶೋ ವೈಶ್ರವಣಃ ಪೌಲಸ್ತ್ಯೋ ನರವಾಹನಃ ॥ ೭೦ ॥

यक्षैकपिङ्गैलविलश्रीदपुण्यजनेश्वराः ।
अस्योद्यानं चैत्ररथं पुत्रस्तु नलकूबरः ॥ ७१ ॥

ಯಕ್ಷೈಕಪಿಂಗೈಲವಿಲಶ್ರೀದಪುಣ್ಯಜನೇಶ್ವರಾಃ ।
ಅಸ್ಯೋದ್ಯಾನಂ ಚೈತ್ರರಥಂ ಪುತ್ರಸ್ತು ನಲಕೂಬರಃ ॥ ೭೧ ॥

कैलासः स्थानमलका पूर्विमानं तु पुष्पकम् ।
स्यात्किंनरः किंपुरुषस्तुरंगवदनो मयुः ॥ ७२ ॥

ಕೈಲಾಸಃ ಸ್ಥಾನಮಲಕಾ ಪೂರ್ವಿಮಾನಂ ತು ಪುಷ್ಪಕಮ್ ।
ಸ್ಯಾತ್ಕಿಂನರಃ ಕಿಂಪುರುಷಸ್ತುರಂಗವದನೋ ಮಯುಃ ॥ ೭೨ ॥

---

೬೯-೭೧. **कुबेरः, त्र्यम्बकसखः, यक्षराट्, गुह्यकेश्वरः, मनुष्यधर्मा, धनदः, राजराजः, धनाधिपः, किंनरेशः, वैश्रवणः, पौलस्त्यः, नरवाहनः, यक्षः, एकपिङ्गः, ऐलविलः, श्रीदः, पुण्यजनेश्वरः** ಈ ೧೭ ಕುಬೇರನ ಹೆಸರುಗಳು (Kubera).

ಕುಬೇರನ ತೋಟಕ್ಕೆ (Kubera's garden) **चैत्ररथम्** ಎಂದೂ, ಇವನ ಮಗನಿಗೆ (His son) **नलकूबरः** ಎಂದೂ ಹೆಸರು.

೭೨. ಇವನ ವಾಸಸ್ಥಾನಕ್ಕೆ (His residence) **कैलासः** ಎಂದೂ, ಇವನ ಪಟ್ಟಣಕ್ಕೆ (His city) **अलका** ಎಂದೂ, ಇವನ ವಿಮಾನಕ್ಕೆ (His aerial car or vehicle) **पुष्पकम्** ಎಂದೂ ಹೆಸರು.

**किंनरः, किंपुरुषः, तुरंगवदनः, मयुः** ಈ ೪ ಕುಬೇರನ ಸೇವಕರಾದ ಕಿನ್ನರರ ಹೆಸರು (His attendants).

निधिर्ना शेवधिर्भेदाः पद्मशङ्खादयो निधेः ।
(महापद्मश्च पद्मश्च शङ्खो मकरकच्छपौ ।
मुकुन्दकुन्दनीलाश्च खर्वश्च निधयो नव ॥ ७३ ॥)

॥ इति स्वर्गवर्गः ॥

ನಿಧಿರ್ನಾ ಶೇವಧಿರ್ಭೇದಾಃ ಪದ್ಮಶಂಖಾದಯೋ ನಿಧೇಃ ।
(ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರಕಚ್ಛಪೌ ।
ಮುಕುಂದಕುಂದನೀಲಾಶ್ಚ ಖರ್ವಶ್ಚ ನಿಧಯೋ ನವ ॥ ೭೩ ॥)

॥ ಇತಿ ಸ್ವರ್ಗವರ್ಗಃ ॥

## ॥ अथ व्योमवर्गः ॥

द्योदिवौ द्वे स्त्रियामभ्रं व्योम पुष्करमम्बरम् ।
नभोऽन्तरिक्षं गगनमनन्तं सुरवर्त्म खम् ॥ १ ॥

॥ ಅಥ ವ್ಯೋಮವರ್ಗಃ ॥

ದ್ಯೋದಿವೌ ದ್ವೇ ಸ್ತ್ರಿಯಾಮಭ್ರಂ ವ್ಯೋಮ ಪುಷ್ಕರಮಮ್ಬರಮ್ ।
ನಭೋಽನ್ತರಿಕ್ಷಂ ಗಗನಮನನ್ತಂ ಸುರವರ್ತ್ಮ ಖಮ್ ॥ ೧ ॥

---

೭೩. **निधिः, शेवधिः,** ಈ ಎರಡೂ ಕುಬೇರನ ಸಾಮಾನ್ಯ ನಿಧಿಗೆ ಹೆಸರು (His treasure). **पद्मः, शङ्खः,** ಇವೇ ಮುಂತಾದವು ಅವನ ನಿಧಿವಿಶೇಷಗಳು (His special treasures). ಅವು ೯. ಯಾವುವೆಂದರೆ — **महापद्मः, पद्मः, शङ्खः, मकरः, कच्छपः, मुकुन्दः, कुन्दः, नीलः, खर्वः** (Kubera's nine treasures).

೧-೨. **द्यौः, द्यौः, अभ्रम्, व्योम, पुष्करम्, अम्बरम्, नभः, अन्तरिक्षम्, (अन्तरीक्षम्), गगनम्, अनन्तम्, सुरवर्त्म, खम्, वियत्, विष्णुपदम्, आकाशम्, विहायः** ಈ ೧೬

वियद्विष्णुपदं वा तु पुंस्याकाशविहायसी ।
[1](विहायसोऽपि नाकोऽपि द्युरपि स्यात्तदव्ययम् ॥ २॥)

ವಿಯದ್ವಿಷ್ಣುಪದಂ ವಾ ತು ಪುಂಸ್ಯಾಕಾಶವಿಹಾಯಸೀ ।
[1](ವಿಹಾಯಸೋಽಪಿ ನಾಕೋಽಪಿ ದ್ಯುರಪಿ ಸ್ಯಾತ್ತದವ್ಯಯಮ್ ॥ ೨ ॥)

(तारापथोऽन्तरिक्षं च मेघाध्वा च महाबिलम् ।
विहायाः शकुने पुंसि गगने पुंनपुंसकम् ॥ ३ ॥)

॥ इति व्योमवर्गः ॥

(ತಾರಾಪಥೋಽನ್ತರಿಕ್ಷಂ ಚ ಮೇಘಾಧ್ವಾ ಚ ಮಹಾಬಿಲಮ್ ।
ವಿಹಾಯಾಃ ಶಕುನೇ ಪುಂಸಿ ಗಗನೇ ಪುಂನಪುಂಸಕಮ್ ॥ ೩ ॥)

॥ ಇತಿ ವ್ಯೋಮವರ್ಗಃ ॥

---

ಆಕಾಶಕ್ಕೆ ಹೆಸರು (the sky; the air or atmosphere). **द्यौः, द्यौः** ಎಂದು ಎರಡು ಪದಗಳಿವೆ. ಒಂದು **द्यो** ಶಬ್ದವು ಓಕಾರಾಂತ ಸ್ತ್ರೀಲಿಂಗ, **द्यौः द्यावौ द्यावः** ಎಂದು **गो** ಶಬ್ದದಂತೆ ಹೇಳಬೇಕು. ಮತ್ತೊಂದು **दिव्** ಶಬ್ದವು ವಕಾರಾಂತ ಸ್ತ್ರೀಲಿಂಗ. **द्यौः दिवौ दिवः**

---

1. ಈ ೩ ಪಙ್ಕ್ತಿಗಳು ಅಧಿಕ ಪಾಠವು. ಅದರಲ್ಲಿ ಹೇಳಿರುವ **विहायसः नाकः, द्युः, तारापथः, अन्तरिक्षम्, मेघाध्वा, महाबिलम्** ಎಂಬ ಈ ೭ ಆಕಾಶಕ್ಕೆ ಹೆಸರುಗಳು. (Space, Vacuity, ether, sky, or atmosphere). **विहायसः, नाकः,** ಇವೆರಡೂ ಪುಲ್ಲಿಂಗಗಳು. **विहायसः विहायसौ विहायसाः** ಎಂದು ಇಲ್ಲಿ ಶಬ್ದರೂಪವು. **द्युः** ಎಂಬುದು ಅವ್ಯಯವು.

**विहायाः** ಎಂದು ಪುಲ್ಲಿಂಗ ಶಬ್ದವಾದರೆ ಪಕ್ಷಿ (Bird) ಎಂದೂ ಅರ್ಥವಾಗುವುದು; ಆಕಾಶ (sky) ಎಂಬ ಅರ್ಥದಲ್ಲಿ **विहायस्** ಶಬ್ದವು ಪುಲ್ಲಿಂಗ ನಪುಂಸಕಲಿಂಗಗಳೆರಡೂ ಆಗುವುದೆಂದು ಈ ಅಧಿಕ ಪಾಠವು ತಿಳಿಸುವುದು.

## ॥ अथ दिग्वर्गः ॥

**दिशस्तु ककुभः काष्ठा आशाश्च हरितश्च ताः ।**
**प्राच्यवाचीप्रतीच्यस्ताः पूर्वदक्षिणपश्चिमाः ॥ १ ॥**

॥ ಅಥ ದಿಗ್ವರ್ಗಃ ॥

ದಿಶಸ್ತು ಕಕುಭಃ ಕಾಷ್ಠಾ ಆಶಾಶ್ಚ ಹರಿತಶ್ಚ ತಾಃ ।
ಪ್ರಾಚ್ಯವಾಚೀಪ್ರತೀಚ್ಯಸ್ತಾಃ ಪೂರ್ವದಕ್ಷಿಣಪಶ್ಚಿಮಾಃ ॥ ೧ ॥

**उत्तरा दिगुदीची स्याद्दिश्यं तु त्रिषु दिग्भवे ।**
**(अवाग्भवमवाचीनमुदीचीनमुदग्भवम् ।**
**प्रत्यग्भवं प्रतीचीनं प्राचीनं प्राग्भवं त्रिषु ॥)**
**इन्द्रो वह्निः पितृपतिर्नैर्ऋतो वरुणो मरुत् ॥ २ ॥**

ಉತ್ತರಾ ದಿಗುದೀಚೀ ಸ್ಯಾದ್ದಿಶ್ಯಂ ತು ತ್ರಿಷು ದಿಗ್ಭವೇ ।
(ಅವಾಗ್ಭವಮವಾಚೀನಮುದೀಚೀನಮುದಗ್ಭವಮ್ ।
ಪ್ರತ್ಯಗ್ಭವಂ ಪ್ರತೀಚೀನಂ ಪ್ರಾಚೀನಂ ಪ್ರಾಗ್ಭವಂ ತ್ರಿಷು ॥)
ಇಂದ್ರೋ ವಹ್ನಿಃ ಪಿತೃಪತಿರ್ನೈರ್ಋತೋ ವರುಣೋ ಮರುತ್ ॥ ೨ ॥

---

ಎಂದು ಶಬ್ದ ಹೇಳಬೇಕು. **आकाशम्, विहायः** ಇವೆರಡೂ ನಪುಂಸಕ ಲಿಂಗಗಳು. ಇವಕ್ಕೆ **आकाशः, विहायाः** ಎಂದು ಪುಲ್ಲಿಂಗ ರೂಪವೂ ಉಂಟು. **विहायाः विहायसौ विहायसः** ಎಂದು ಪುಲ್ಲಿಂಗದಲ್ಲಿ ಶಬ್ದ ಹೇಳಬೇಕು. **विहायः विहायसी विहायांसि** ಎಂದು ನಪುಂಸಕದಲ್ಲಿ ಹೇಳಬೇಕು.

೧. **दिशः, ककुभः, काष्ठाः, आशाः, हरितः** ಈ ೫ ದಿಕ್ಕುಗಳಿಗೆ ಸಾಮಾನ್ಯವಾದ ಹೆಸರು (The several quarters or directions). ಒಂದೊಂದು ಪದವೂ ಬಹುವಚನದಲ್ಲಿರುವುದರಿಂದ

**कुबेर ईशः पतयः पूर्वादीनां दिशां क्रमात् ।**
**(रविः शुक्रो महीसूनुः स्वर्भानुर्भानुजो विधुः ।**
**बुधो बृहस्पतिश्चेति दिशां चैव तथा ग्रहाः ॥)**
**ऐरावतः पुण्डरीको वामनः कुमुदोऽञ्जनः ॥ ३ ॥**

ಕುಬೇರ ಈಶಃ ಪತಯಃ ಪೂರ್ವಾದೀನಾಂ ದಿಶಾಂ ಕ್ರಮಾತ್ ।
(ರವಿಃ ಶುಕ್ರೋ ಮಹೀಸೂನುಃ ಸ್ವರ್ಭಾನುರ್ಭಾನುಜೋ ವಿಧುಃ ।
ಬುಧೋ ಬೃಹಸ್ಪತಿಶ್ಚೇತಿ ದಿಶಾಂ ಚೈವ ತಥಾ ಗ್ರಹಾಃ ॥)
ಐರಾವತಃ ಪುಂಡರೀಕೋ ವಾಮನಃ ಕುಮುದೋಽಂಜನಃ ॥ ೩ ॥

**पुष्पदन्तः सार्वभौमः सुप्रतीकश्च दिग्गजाः ।**
**करिण्योऽभ्रमुकपिलापिङ्गलानुपमाः क्रमात् ॥ ४ ॥**

ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕಶ್ಚ ದಿಗ್ಗಜಾಃ ।
ಕರಿಣ್ಯೋಽಭ್ರಮುಕಪಿಲಾಪಿಂಗಲಾನುಪಮಾಃ ಕ್ರಮಾತ್ ॥ ೪ ॥

---

ದಿಕ್ಕುಗಳು ಎಂದು ಬಹುವಚನಾರ್ಥವು. **ताः** ಎಂದು ಹೇಳಿರುವುದರಿಂದ ಎಲ್ಲವೂ ಸ್ತ್ರೀಲಿಂಗಶಬ್ದಗಳೆಂದು ತಿಳಿಯಬೇಕು.

**प्राची** (East), **अवाची** (South), **प्रतीची** (West), **उदीची** (North), ಎಂದು ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ಮತ್ತು ಉತ್ತರ ದಿಕ್ಕುಗಳ ಹೆಸರುಗಳು.

೨. **दिश्यम्** ಎಂಬ ಒಂದು ಪದವು ದಿಕ್ಕಿಗೆ ಸಂಬಂಧಪಟ್ಟಿದು, ಅಥವಾ ದಿಕ್ಕಿನಲ್ಲಿ ಹುಟ್ಟಿದುದೆಂಬುದನ್ನು ಸೂಚಿಸುವುದು (Relating to the quarters or being there). ಈ ಪದವು ವಿಶೇಷ್ಯಾಧೀನವಾದ್ದರಿಂದ ಮೂರು ಲಿಂಗವನ್ನೂ ಹೊಂದುವುದು.

**अवाचीनम्** – ತೆಂಕಲದು (Relating to the South) **उदीचीनम्** – ಬಡಗಲದು (Relating to the North), **प्रती-**

**ताम्रकर्णी शुभ्रदन्ती चाङ्गना चाञ्जनावती ।**
**क्लीबाव्ययं त्वपदिशं दिशोर्मध्ये विदिक् स्त्रियाम् ॥ ५ ॥**

ತಾಮ್ರಕರ್ಣೀ ಶುಭ್ರದಂತೀ ಚಾಂಗನಾ ಚಾಂಜನಾವತೀ ।
ಕ್ಲೀಬಾವ್ಯಯಂ ತ್ವಪದಿಶಂ ದಿಶೋರ್ಮಧ್ಯೇ ವಿದಿಕ್ ಸ್ತ್ರಿಯಾಮ್ ॥ ೫ ॥

**अभ्यन्तरं त्वन्तरालं चक्रवालं तु मण्डलम् ।**
**अभ्रं मेघो वारिवाहः स्तनयित्नुर्बलाहकः ॥ ६ ॥**

ಅಭ್ಯಂತರಂ ತ್ವಂತರಾಲಂ ಚಕ್ರವಾಲಂ ತು ಮಂಡಲಮ್ ।
ಅಭ್ರಂ ಮೇಘೋ ವಾರಿವಾಹಃ ಸ್ತನಯಿತ್ನುರ್ಬಲಾಹಕಃ ॥ ೬ ॥

---

**चीनम्** – ಪಡವಲದಿಕ್ಕಿನದು (Relating to the West), **प्राचीनम्** – ಮೂಡಲದು (Relating to the East), ಈ ಶಬ್ದಗಳೆಲ್ಲವೂ ಮೂರು ಲಿಂಗಗಳಲ್ಲಿಯೂ ಇರುತ್ತವೆ.

೨-೩. **इन्द्रः, वह्निः, पितृपतिः, नैरृतः, वरुणः, मरुत्, कुबेरः, ईशः**— ಇವು ಕ್ರಮವಾಗಿ ಎಂಟು ದಿಕ್ಕುಗಳ ಅಧಿಪತಿಗಳ ಹೆಸರುಗಳು (The regents of the cardinal points in their respective order from the East). ಮೂಡಲು ಮುಂತಾದ ೪ ಮತ್ತು ಅವುಗಳ ನಡುವೆ ಇರುವ ೪ ದಿಕ್ಕುಗಳು ಸೇರಿ ೮ ದಿಕ್ಕುಗಳಾಗುತ್ತವೆ.

**रविः, शुक्रः, महीसूनुः, स्वर्भानुः, भानुजः, विधुः, बुधः, बृहस्पतिः** ಇವು ಕ್ರಮವಾಗಿ ಎಂಟು ದಿಕ್ಕುಗಳ ಗ್ರಹಗಳ ಹೆಸರುಗಳು. (Names of the eight planets in their respective order from the East).

೩-೪. **ऐरावतः, पुण्डरीकः, वामनः, कुमुदः, अञ्जनः, पुष्पदन्तः, सार्वभौमः, सुप्रतीकः** ಇವು ಕ್ರಮವಾಗಿ ಅಷ್ಟದಿಗ್ಗಜಗಳ ಹೆಸರುಗಳು (The eight elephants of the eight cardinal

**धाराधरो जलधरस्तडित्वान्वारिदोऽम्बुभृत् ।**
**घनजीमूतमुदिरजलमुग्धूमयोनयः ॥ ७ ॥**

ಧಾರಾಧರೋ ಜಲಧರಸ್ತಡಿತ್ವಾನ್ವಾರಿದೋಽಂಬುಭೃತ್ ।
ಘನಜೀಮೂತಮುದಿರಜಲಮುಗ್ಧೂಮಯೋನಯಃ ॥ ೭ ॥

**कादम्बिनी मेघमाला त्रिषु मेघभवेऽभ्रियम् ।**
**स्तनितं गर्जितं मेघनिर्घोषे रसितादि च ॥ ८ ॥**

ಕಾದಂಬಿನೀ ಮೇಘಮಾಲಾ ತ್ರಿಷು ಮೇಘಭವೇಽಭ್ರಿಯಮ್ ।
ಸ್ತನಿತಂ ಗರ್ಜಿತಂ ಮೇಘನಿರ್ಘೋಷೇ ರಸಿತಾದಿ ಚ ॥ ೮ ॥

---

points in their due order from the East).

೪-೫. **अभ्रमुः, कपिला, पिङ्गला, अनुपमा, ताम्रकर्णी, शुभ्रदन्ती, अङ्गना, अञ्जनावती** ಇವು ಕ್ರಮವಾಗಿ ಐರಾವತಾದಿ ಅಷ್ಟದಿಗ್ಗಜಗಳ ಭಾರ್ಯೆಯರ ಹೆಸರುಗಳು (The females of the quarter-elephants in due order).

**अपदिशम्, विदिक्** ಈ ೨, ಎರಡು ದಿಕ್ಕುಗಳ ಮಧ್ಯೆ ಇರುವ ಮೂಲೆ (The intermediate point or corner between any two directions). **अपदिशम्** ಎಂಬುದು ನಪುಂಸಕಲಿಂಗವೂ ಮತ್ತು ಅವ್ಯಯವೂ ಆಗುವುದು. **विदिक्** ಎಂಬುದು ಸ್ತ್ರೀಲಿಂಗವು.

೬-೭. **अभ्यन्तरम्, अन्तरालम्** ಈ ೨, ಎರಡು ಪ್ರದೇಶಗಳ ಮಧ್ಯಭಾಗಕ್ಕೆ ಹೆಸರು (The middle region or the included space). **चक्रवालम्, मण्डलम्** ಈ ೨ ಚಕ್ರಾಕಾರವಾದ ಅಥವಾ ಗುಂಡಾದ ಪ್ರದೇಶಕ್ಕೆ ಹೆಸರು (The circular region or horizon).

**अभ्रम्, मेघः, वारिवाहः, स्तनयित्नुः, बलाहकः, धाराधरः, जलधरः, तडित्वान्, वारिदः, अम्बुभृत्, घनः,**

**शंपाशतह्रदाह्रादिन्यैरावत्यः क्षणप्रभा ।**
**तडित्सौदामनी विद्युच्चञ्चला चपला अपि ॥ ९ ॥**

ಶಂಪಾಶತಹ್ರದಾಹ್ರಾದಿನ್ಯೈರಾವತ್ಯಃ ಕ್ಷಣಪ್ರಭಾ |
ತಡಿತ್ಸೌದಾಮನೀ ವಿದ್ಯುಚ್ಚಂಚಲಾ ಚಪಲಾ ಅಪಿ || ೯ ||

**स्फूर्जथुर्वज्रनिर्घोषो मेघज्योतिरिरंमदः ।**
**इन्द्रायुधं शक्रधनुस्तदेव ऋजुरोहितम् ॥ १० ॥**

ಸ್ಫೂರ್ಜಥುರ್ವಜ್ರನಿರ್ಘೋಷೋ ಮೇಘಜ್ಯೋತಿರಿರಂಮದಃ |
ಇಂದ್ರಾಯುಧಂ ಶಕ್ರಧನುಸ್ತದೇವ ಋಜುರೋಹಿತಮ್ || ೧೦ ||

---

**जीमूतः, मुदिरः, जलमुक्, धूमयोनिः** ಈ ೧೫ ಮೇಘ ಅಥವಾ ಮೋಡದ ಹೆಸರು (A cloud).

೮. **कादम्बिनी, मेघमाला,** ಈ ೨, ಮೇಘಗಳ ಪಙ್ಕ್ತಿ ಅಥವಾ ಸಾಲಿಗೆ ಹೆಸರು (A line of clouds). **अभ्रियम्** ಎಂದರೆ ಮೇಘದಲ್ಲಿ ಹುಟ್ಟಿದುದು (ಜಲಾದಿಗಳು) (Anything belonging to or produced from the clouds). ಈ ಪದವು ಮೂರು ಲಿಂಗಗಳಲ್ಲಿಯೂ ಉಂಟು.

**स्तनितम्, गर्जितम्, रसितम्,** ಈ ೩, ಗುಡುಗಿಗೆ ಹೆಸರು (Thunder). **आदि** ಶಬ್ದದಿಂದ **स्वनितम्, ध्वनितम्** ಮುಂತಾದ ಶಬ್ದಗಳನ್ನು ಊಹಿಸಿಕೊಳ್ಳಬೇಕು.

೯. **शंपा, शतह्रदा, ह्रादिनी, ऐरावती, क्षणप्रभा, तडित्, सौदामनी, विद्युत्, चञ्चला, चपला** ಈ ೧೦ ಮಿಂಚಿನ ಹೆಸರುಗಳು (Lightning).

೧೦. **स्फूर्जथुः, वज्रनिर्घोषः** ಈ ೨, ಸಿಡಿಲಿನ ಶಬ್ದಕ್ಕೂ (Thunderclap), **मेघज्योतिः, इरंमदः** ಈ ೨, ಮೇಘದಲ್ಲಿರುವ ತೇಜಸ್ಸಿಗೂ (Brightness of clouds) ಹೆಸರುಗಳು.

**वृष्टिर्वर्षं तद्विघातेऽवग्राहाऽवग्रहौ समौ ।**
**धारासंपात आसारः शीकरोऽम्बुकणाः स्मृताः ॥ ११ ॥**

ವೃಷ್ಟಿರ್ವರ್ಷಂ ತದ್ವಿಘಾತೇಽವಗ್ರಾಹಾಽವಗ್ರಹೌ ಸಮೌ ।
ಧಾರಾಸಂಪಾತ ಆಸಾರಃ ಶೀಕರೋಽಮ್ಬುಕಣಾಃ ಸ್ಮೃತಾಃ ॥ ೧೧ ॥

**वर्षोपलस्तु करका मेघच्छन्नेऽह्नि दुर्दिनम् ।**
**अन्तर्धा व्यवधा पुंसि त्वन्तर्द्धिरपवारणम् ॥ १२ ॥**

ವರ್ಷೋಪಲಸ್ತು ಕರಕಾ ಮೇಘಚ್ಛನ್ನೇಽಹ್ನಿ ದುರ್ದಿನಮ್ ।
ಅನ್ತರ್ಧಾ ವ್ಯವಧಾ ಪುಂಸಿ ತ್ವನ್ತರ್ದ್ಧಿರಪವಾರಣಮ್ ॥ ೧೨ ॥

---

**इन्द्रायुधम्, शक्रधनुः,** ಈ ೨ ಇಂದ್ರನ ಧನುಸ್ಸು (Indra's Bow). ಮೇಘದಲ್ಲಿ ಪ್ರತಿಬಿಂಬಿತವಾದ ಸೂರ್ಯರಶ್ಮಿಗಳಿಂದ, ಆಕಾಶದಲ್ಲಿ ಬಣ್ಣಬಣ್ಣವಾಗಿಯೂ ಧನುರಾಕಾರವಾಗಿಯೂ ಪ್ರಕಾಶಿಸುವುದಕ್ಕೆ ಈ ಹೆಸರುಗಳನ್ನು ಹೇಳುತ್ತಾರೆ. ಇದನ್ನೇ "ಸುರಚಾಪ", "ಕಾಮನ ಬಿಲ್ಲು" ಎಂದೂ ಕರೆಯುತ್ತಾರೆ (Rain-bow). ಆ ಬಿಲ್ಲೇ ಬಗ್ಗಿರದೆ **ऋजु** ಎಂದರೆ ನೆಟ್ಟಗಿರುವಾಗ **रोहितम्** ಎನಿಸಿಕೊಳ್ಳುತ್ತದೆ (Indra's bow, red and unbent), **ऋजुरोहितम्** ಎಂದೂ ಪ್ರಯೋಗವುಂಟು.

೧೧. **वृष्टिः, वर्षम्** ೨, ಮಳೆ (Rain). **अवग्राहः, अवग्रहः** ೨, ಮಳೆ ಇಲ್ಲದಿರುವಿಕೆ (ಅನಾವೃಷ್ಟಿ, ಕ್ಷಾಮ) (Drought). **धारासंपातः, आसारः,** ೨, ಎಡೆಬಿಡದೆ ಸುರಿಯುವ ಮಳೆ (Incessant rain). **शीकरः (सीकरः)** ೧, ತುಂತುರುಮಳೆ (Drizzling rain or spray).

೧೨-೧೩. **वर्षोपलः, करका** ೨, ಆಲಿಕಲ್ಲು (Hail). **दुर्दिनम्** ೧, ಮೋಡ ಮುಚ್ಚಿಕೊಂಡಿರುವ ದಿನ (A cloudy day). **अन्तर्धा, व्यवधा, अन्तर्द्धिः, अपवारणम्, अपिधानम्, तिरोधानम्, पिधानम्, आच्छादनम्,** ಈ ೮, ಹೊದಿಕೆ, ಮುಚ್ಚಳ, ಕಾಣದಿರುವಿಕೆ,

**अपिधानतिरोधानपिधानाच्छादनानि च ।**
**हिमांशुश्चन्द्रमाश्चन्द्र इन्दुः कुमुदबान्धवः ॥ १३ ॥**

ಅಪಿಧಾನತಿರೋಧಾನಪಿಧಾನಾಚ್ಛಾದನಾನಿ ಚ ।
ಹಿಮಾಂಶುಶ್ಚನ್ದ್ರಮಾಶ್ಚನ್ದ್ರ ಇನ್ದುಃ ಕುಮುದಬಾನ್ಧವಃ ॥ ೧೩ ॥

**विधुः सुधांशुः शुभ्रांशुरोषधीशो निशापतिः ।**
**अब्जो जैवातृकः सोमो ग्लौर्मृगाङ्कः कलानिधिः ॥ १४ ॥**

ವಿಧುಃ ಸುಧಾಂಶುಃ ಶುಭ್ರಾಂಶುರೋಷಧೀಶೋ ನಿಶಾಪತಿಃ ।
ಅಬ್ಜೋ ಜೈವಾತೃಕಃ ಸೋಮೋ ಗ್ಲೌರ್ಮೃಗಾಙ್ಕಃ ಕಲಾನಿಧಿಃ ॥ ೧೪ ॥

---

ಮುಂತಾದ ಅರ್ಥಗಳಲ್ಲಿ ಉಪಯೋಗಿಸುವ ಶಬ್ದಗಳು (Cover, covering or disappearance). ಇವುಗಳಲ್ಲಿ **अन्तर्धा**, **व्यवधा** ಎಂಬ ಶಬ್ದಗಳು ಸ್ತ್ರೀಲಿಂಗ, **अन्तर्द्धिः** ಎಂಬುದು ಪುಲ್ಲಿಂಗ.

೧೩–೧೫. **हिमांशु**, **चन्द्रमाः**, **चन्द्रः**, **इन्दुः**, **कुमुदबान्धवः**, **विधुः**, **सुधांशुः**, **शुभ्रांशुः**, **ओषधीशः**, **निशापतिः**, **अब्जः**, **जैवातृकः**, **सोमः**, **ग्लौः**, **मृगाङ्कः**, **कलानिधिः**, **द्विजराजः**, **शशधरः**, **नक्षत्रेशः**, **क्षपाकरः** ಈ ೨೦ ಚಂದ್ರನ ಹೆಸರುಗಳು (The Moon).

**कला** ೧, ಚಂದ್ರ ಬಿಂಬದ ಹದಿನಾರನೆಯ ಅಂಶ (A digit or one-sixteenth part of the moon's diameter), **बिम्बः**, **मण्डलम्** ೨, ಸೂರ್ಯ ಅಥವಾ ಚಂದ್ರಮಂಡಲ (Disc of the Sun or Moon). **मण्डल** ಶಬ್ದವು ೩ ಲಿಂಗಗಳಲ್ಲಿಯೂ ಉಂಟು.

೧೬. **भित्तम्**, **शकलम्**, **खण्डम्**, **अर्धः** ಈ ೪, ತುಂಡು ಅಥವಾ ಒಂದು ಚೂರಿಗೆ ಹೆಸರು (A fragment or part). **भित्तम्**, ಎಂಬುದು ನಪುಂಸಕಲಿಂಗ. **शकल** ಮತ್ತು **खण्ड** ಶಬ್ದಗಳಿಗೆ ಪುಲ್ಲಿಂಗ ನಪುಂಸಕಲಿಂಗಗಳೆರಡೂ ಉಂಟು. **अर्धः** ಎಂಬುದು ಪುಲ್ಲಿಂಗ ಮತ್ತು

द्विजराजः शशधरो नक्षत्रेशः क्षपाकरः ।
कला तु षोडशो भागो बिम्बोऽस्त्री मण्डलं त्रिषु ॥ १५ ॥

ದ್ವಿಜರಾಜಃ ಶಶಧರೋ ನಕ್ಷತ್ರೇಶಃ ಕ್ಷಪಾಕರಃ |
ಕಲಾ ತು ಷೋಡಶೋ ಭಾಗೋ ಬಿಂಬೋऽಸ್ತ್ರೀ ಮಂಡಲಂ ತ್ರಿಷು || ೧೫ ||

भित्तं शकलखण्डे वा पुंस्यर्धोऽर्धं समेंऽशके ।
चन्द्रिका कौमुदी ज्योत्स्ना प्रसादस्तु प्रसन्नता ॥ १६ ॥

ಭಿತ್ತಂ ಶಕಲಖಂಡೇ ವಾ ಪುಂಸ್ಯರ್ಧೋऽರ್ಧಂ ಸಮೇऽಂಶಕೇ |
ಚಂದ್ರಿಕಾ ಕೌಮುದೀ ಜ್ಯೋತ್ಸ್ನಾ ಪ್ರಸಾದಸ್ತು ಪ್ರಸನ್ನತಾ || ೧೬ ||

कलङ्काङ्कौ लाञ्छनं च चिह्नं लक्ष्म च लक्षणम् ।
सुषमा परमा शोभा शोभा कान्तिर्द्युतिश्छविः ॥ १७ ॥

ಕಲಙ್ಕಾಙ್ಕೌ ಲಾಞ್ಛನಂ ಚ ಚಿಹ್ನಂ ಲಕ್ಷ್ಮ ಚ ಲಕ್ಷಣಮ್ |
ಸುಷಮಾ ಪರಮಾ ಶೋಭಾ ಶೋಭಾ ಕಾಂತಿರ್ದ್ಯುತಿಶ್ಛವಿಃ || ೧೭ ||

---

ವಾಚ್ಯಲಿಂಗವೂ ಆಗುವುದು. ಸಮಭಾಗ ಎಂಬ ಅರ್ಥದಲ್ಲಿ **अर्ध** ಶಬ್ದವು ನಪುಂಸಕಲಿಂಗವೇ ಆಗುವುದು.

**चन्द्रिका, कौमुदी, ज्योत्स्ना** ಈ ೩, ಬೆಳುದಿಂಗಳಿಗೆ ಹೆಸರು (Moon-light). **प्रसादः, प्रसन्नता,** ಈ ೨ ನೈರ್ಮಲ್ಯ ಅಥವಾ ಸ್ವಚ್ಛತೆಗೆ ಹೆಸರು (Purity, clearness or brightness).

೧೭. **कलङ्कः, अङ्कः, लाञ्छनम्, चिह्नम्, लक्ष्म, लक्षणम्,** ಈ ೬, ಗುರುತಿಗೆ ಹೆಸರು (A spot or mark). ಬಹಳ ಹೊಳಪು ಅಥವಾ ಹೆಚ್ಚಾದ ಕಾಂತಿಗೆ **सुषमा** ಎಂದು ಹೆಸರು (Exquisite beauty or splendour). **शोभा, कान्तिः, द्युतिः, छविः** ಈ ೪, ಕಾಂತಿಗೆ ಮಾತ್ರ ಹೆಸರುಗಳು (Beauty, brightness or splendour).

अवश्यायस्तु नीहारस्तुषारस्तुहिनं हिमम् ।
प्रालेयं मिहिका चाथ हिमानी हिमसंहतिः ॥ १८ ॥

ಅವಶ್ಯಾಯಸ್ತು ನೀಹಾರಸ್ತುಷಾರಸ್ತುಹಿನಂ ಹಿಮಮ್ ।
ಪ್ರಾಲೇಯಂ ಮಿಹಿಕಾ ಚಾಥ ಹಿಮಾನೀ ಹಿಮಸಂಹತಿಃ ॥ ೧೮ ॥

शीतं गुणे तद्वदर्थाः सुषीमः शिशिरो जडः ।
तुषारः शीतलः शीतो हिमः सप्तान्यलिङ्गकाः ॥ १९ ॥

ಶೀತಂ ಗುಣೇ ತದ್ವದರ್ಥಾಃ ಸುಷೀಮಃ ಶಿಶಿರೋ ಜಡಃ ।
ತುಷಾರಃ ಶೀತಲಃ ಶೀತೋ ಹಿಮಃ ಸಪ್ತಾನ್ಯಲಿಂಗಕಾಃ ॥ ೧೯ ॥

ध्रुव औत्तानपादिः स्यादगस्त्यः कुम्भसंभवः ।
मैत्रावरुणिरस्यैव लोपामुद्रा सधर्मिणी ॥ २० ॥

ಧ್ರುವ ಔತ್ತಾನಪಾದಿಃ ಸ್ಯಾದಗಸ್ತ್ಯಃ ಕುಂಭಸಂಭವಃ ।
ಮೈತ್ರಾವರುಣಿರಸ್ಯೈವ ಲೋಪಾಮುದ್ರಾ ಸಧರ್ಮಿಣೀ ॥ ೨೦ ॥

---

೧೮. **अवश्यायः, नीहारः, तुषारः, तुहिनम्, हिमम्, प्रालेयम्, मिहिका** ಈ ೭ ಮಂಜಿನ ಹೆಸರುಗಳು (Dew or frost). **हिमानी, हिमसंहतिः** ಈ ೨ ಮಂಜಿನ ಗುಂಪಿಗೆ ಹೆಸರು (Mass or collection of snow).

೧೯. **शीतम्** ಎಂದರೆ ಶೈತ್ಯಗುಣ (Cold). ಈ ಶಬ್ದವು ಕೇವಲ ಗುಣವಾಚಕವಾದಲ್ಲಿ ನಪುಂಸಕಲಿಂಗವು. **सुषीमः (सुषिमः), शिशिरः जडः, तुषारः, शीतलः, शीतः, हिमः** ಈ ೭ ಶೈತ್ಯಗುಣವುಳ್ಳ ವಸ್ತುವನ್ನು ತಿಳಿಸುವುದು (Cold or frigid object). ಈ ಶಬ್ದಗಳ ಲಿಂಗಗಳು ವಿಶೇಷ್ಯದ ಲಿಂಗವನ್ನು ಅನುಸರಿಸುತ್ತವೆ.

೨೦. **ध्रुवः, औत्तानपादिः** ಈ ೨ ಉತ್ತಾನಪಾದನ ಮಗನಾದ ಧ್ರುವ (Name of Dhruva) ಅಥವಾ ಆ ಹೆಸರಿನ ನಕ್ಷತ್ರವು

**नक्षत्रमृक्षं भं तारा तारकाप्युडु वा स्त्रियाम् ।**
**दाक्षायण्योऽश्विनीत्यादितारा अश्वयुगश्विनी ॥ २१ ॥**

ನಕ್ಷತ್ರಮೃಕ್ಷಂ ಭಂ ತಾರಾ ತಾರಕಾಪ್ಯುಡು ವಾ ಸ್ತ್ರಿಯಾಮ್ ।
ದಾಕ್ಷಾಯಣ್ಯೋಽಶ್ವಿನೀತ್ಯಾದಿತಾರಾ ಅಶ್ವಯುಗಶ್ವಿನೀ ॥ ೨೧ ॥

**राधा विशाखा पुष्ये तु सिध्यतिष्यौ श्रविष्ठया ।**
**समा धनिष्ठा स्युः प्रोष्ठपदा भाद्रपदाः स्त्रियः ॥ २२ ॥**

ರಾಧಾ ವಿಶಾಖಾ ಪುಷ್ಯೇ ತು ಸಿಧ್ಯತಿಷ್ಯೌ ಶ್ರವಿಷ್ಠಯಾ ।
ಸಮಾ ಧನಿಷ್ಠಾ ಸ್ಯುಃ ಪ್ರೋಷ್ಠಪದಾ ಭಾದ್ರಪದಾಃ ಸ್ತ್ರಿಯಃ ॥ ೨೨ ॥

---

(Name of the Polar Star). **अगस्त्यः, कुम्भसम्भवः, मैत्रावरुणिः** ಈ ೩ ಅಗಸ್ತ್ಯನ ಹೆಸರುಗಳು (Name of Agastya). **लोपामुद्रा** ಎಂದು ಅಗಸ್ತ್ಯನ ಧರ್ಮಪತ್ನಿಯ ಹೆಸರು (Agastya's wife).

೨೧. **नक्षत्रम्, ऋक्षम्, भम्, तारा, तारका, उडु** ಈ ೬ ನಕ್ಷತ್ರಕ್ಕೆ ಹೆಸರುಗಳು. (Star, an asterism or constellation). **उडु** ಶಬ್ದಕ್ಕೂ **तारक** ಶಬ್ದಕ್ಕೂ ಸ್ತ್ರೀನಪುಂಸಕಲಿಂಗಗಳೆರಡೂ ಉಂಟು. **दाक्षायणी**—ಇದು ಅಶ್ವಿನೀ ಮುಂತಾದ ೨೭ ನಕ್ಷತ್ರಗಳಿಗೆ ಒಂದೇ ಹೆಸರು. **दाक्षायण्यः** ಎಂಬುದು ಬಹುವಚನ, ೨೭ ನಕ್ಷತ್ರಗಳು ಎಂದು ಅರ್ಥ. (the 27 lunar mansions considered as daughters of Daksha and wives of the moon). **अश्वयुक्, अश्विनी** ಈ ೨ ಅಶ್ವಿನೀ ನಕ್ಷತ್ರದ ಹೆಸರುಗಳು (Asvini, the first lunar asterism).

೨೨. **राधा, विशाखा** ಈ ೨ ವಿಶಾಖಾ ನಕ್ಷತ್ರ (the 16th lunar asterism). **पुष्यः, सिध्यः, तिष्यः** ಈ ೩ ಪುಷ್ಯ ನಕ್ಷತ್ರ (the 8th lunar asterism). **श्रविष्ठा, धनिष्ठा** ಈ ೨ ಧನಿಷ್ಠಾ ನಕ್ಷತ್ರ

**मृगशीर्षं मृगशिरस्तस्मिन्नेवाग्रहायणी ।**
**इल्वलास्तच्छिरोदेशे तारका निवसन्ति याः ॥ २३ ॥**

ಮೃಗಶೀರ್ಷಂ ಮೃಗಶಿರಸ್ತಸ್ಮಿನ್ನೇವಾಗ್ರಹಾಯಣೀ ।
ಇಲ್ವಲಾಸ್ತಚ್ಛಿರೋದೇಶೇ ತಾರಕಾ ನಿವಸಂತಿ ಯಾಃ ॥ ೨೩ ॥

**बृहस्पतिः सुराचार्यो गीष्पतिर्धिषणो गुरुः ।**
**जीव आङ्गिरसो वाचस्पतिश्चित्रशिखण्डिजः ॥ २४ ॥**

ಬೃಹಸ್ಪತಿಸ್ಸುರಾಚಾರ್ಯೋ ಗೀಷ್ಪತಿರ್ಧಿಷಣೋ ಗುರುಃ ।
ಜೀವ ಆಂಗಿರಸೋ ವಾಚಸ್ಪತಿಶ್ಚಿತ್ರಶಿಖಂಡಿಜಃ ॥ ೨೪ ॥

---

(the 23rd lunar asterism). **प्रोष्ठपदाः, भाद्रपदाः** ಈ ೨ ಪೂರ್ವಾಭಾದ್ರಪದ, ಉತ್ತರಾಭಾದ್ರಪದ ನಕ್ಷತ್ರಗಳ ಹೆಸರುಗಳು (the 25th lunar asterism). ಇವು ಸ್ತ್ರೀಲಿಂಗಶಬ್ದಗಳು. ಒಂದೊಂದರಲ್ಲಿಯೂ ಜೋಡಿ ಜೋಡಿಯಾಗಿ ಎರಡೆರಡು ನಕ್ಷತ್ರಗಳಿವೆ. ಹೇಗೆಂದರೆ ಪೂರ್ವಪ್ರೋಷ್ಠಪದದಲ್ಲಿ ೨, ಉತ್ತರಪ್ರೋಷ್ಠಪದದಲ್ಲಿ ೨, ಒಟ್ಟು ೪ ನಕ್ಷತ್ರಗಳಿರುವುದರಿಂದ **प्रोष्ठपदाः** ಎಂದು ಬಹುವಚನದಲ್ಲಿ ಹೇಳಿದೆ. ಹೀಗೆಯೇ ಪೂರ್ವಾಭಾದ್ರಪದೋತ್ತರಾಭಾದ್ರಪದಗಳಲ್ಲಿ ಒಟ್ಟು ೪ ನಕ್ಷತ್ರಗಳಿರುವುದರಿಂದ **भाद्रपदाः** ಎಂದು ಬಹುವಚನ ಪ್ರಯೋಗವಿದೆ.

೨೩. **मृगशीर्षम्, मृगशिरः, आग्रहायणी** ಈ ೩ ಮೃಗಶಿರ ನಕ್ಷತ್ರಗಳ ಹೆಸರು (Orion or the 5th lunar asterism). ಈ ಮೃಗಶಿರ ನಕ್ಷತ್ರದ ತಲೆಯಮೇಲೆ ಇರುವ ೫ ನಕ್ಷತ್ರಗಳಿಗೆ **इल्वलाः** ( **इन्वकाः** ) ಎಂದು ಒಂದೇ ಹೆಸರು (Names of the 5 stars in Orion's head). ಈ ಶಬ್ದವು ಸ್ತ್ರೀಲಿಂಗ ಮತ್ತು ನಿತ್ಯಬಹುವಚನ.

೨೪. **बृहस्पतिः, सुराचार्यः, गीष्पतिः, धिषणः, गुरुः, जीवः, आङ्गिरसः, वाचस्पतिः, चित्रशिखण्डिजः** ಈ ೯ ಬೃಹಸ್ಪತಿಯ ಹೆಸರುಗಳು (Brihaspati or Jupiter).

शुक्रो दैत्यगुरुः काव्य उशना भार्गवः कविः ।
अङ्गारकः कुजो भौमो लोहिताङ्गो महीसुतः ॥ २५ ॥

ಶುಕ್ರೋ ದೈತ್ಯಗುರುಃ ಕಾವ್ಯ ಉಶನಾ ಭಾರ್ಗವಃ ಕವಿಃ ।
ಅಂಗಾರಕಃ ಕುಜೋ ಭೌಮೋ ಲೋಹಿತಾಂಗೋ ಮಹೀಸುತಃ ॥ ೨೫ ॥

रौहिणेयो बुधः सौम्यः समौ सौरिशनैश्चरौ ।
(शनिमन्दौ पङ्गुकालौ छायापुत्रोऽसितोऽर्कजः ।)
तमस्तु राहुः स्वर्भानुः सैंहिकेयो विधुन्तुदः ॥ २६ ॥

ರೌಹಿಣೇಯೋ ಬುಧಃ ಸೌಮ್ಯಃ ಸಮೌ ಸೌರಿಶನೈಶ್ಚರೌ ।
(ಶನಿಮಂದೌ ಪಂಗುಕಾಲೌ ಛಾಯಾಪುತ್ರೋಽಸಿತೋಽರ್ಕಜಃ ।)
ತಮಸ್ತು ರಾಹುಃ ಸ್ವರ್ಭಾನುಃ ಸೈಂಹಿಕೇಯೋ ವಿಧುಂತುದಃ ॥ ೨೬ ॥

---

೨೫. **शुक्रः, दैत्यगुरुः, काव्यः, उशना, भार्गवः, कविः** ಈ ೬ ಶುಕ್ರನ ಹೆಸರು (Sukra or Venus).

**अङ्गारकः, कुजः, भौमः, लोहिताङ्गः, महीसुतः** ಈ ೫ ಅಂಗಾರಕನ ಹೆಸರು (Mars).

೨೬. **रौहिणेयः, बुधः, सौम्यः** ಈ ೩ ಬುಧನ ಹೆಸರು (Mercury). **सौरिः, शनैश्चरः** ಈ ೨ ಶನೈಶ್ಚರನ ಹೆಸರು (Saturn). (ಇಲ್ಲಿ **शौरिः, सौरः** ಎಂದು ಪಾಠಾಂತರವೂ ಇದೆ; ಅಲ್ಲದೆ **शनिः, मन्दः, पङ्गुः, कालः, छायापुत्रः, असितः, अर्कजः** ಎಂಬ ಹೆಚ್ಚಿಗೆ ಪಾಠದ ೭ ಹೆಸರುಗಳೂ ಕೂಡ ಶನೈಶ್ಚರನಿಗೆ ಹೇಳಿದೆ.)

**तमः, राहुः, स्वर्भानुः, सैंहिकेयः, विधुन्तुदः** ಈ ೫ ರಾಹುವಿನ ಹೆಸರುಗಳು (Rahu, the ascending node). **केतुः, शिखी** ಎಂಬ ೨ ಹೆಸರುಗಳು ಕೇತುಗ್ರಹಕ್ಕೆ (Ketu, the descending node ; the 9th planet) ಎಂದು ಬೇರೆ ಕೋಶವು ತಿಳಿಸುತ್ತದೆ.

सप्तर्षयो मरीच्यत्रिमुखाश्चित्रशिखण्डिनः ।
राशीनामुदयो लग्नं ते तु मेषवृषादयः ॥ २७ ॥

ಸಪ್ತರ್ಷಯೋ ಮರೀಚ್ಯತ್ರಿಮುಖಾಶ್ಚಿತ್ರಶಿಖಂಡಿನಃ |
ರಾಶೀನಾಮುದಯೋ ಲಗ್ನಂ ತೇ ತು ಮೇಷವೃಷಾದಯಃ ॥ ೨೭ ॥

सूरसूर्यार्यमाऽदित्यद्वादशात्मदिवाकराः ।
भास्कराहस्करब्रध्नप्रभाकरविभाकराः ॥ २८ ॥

ಸೂರಸೂರ್ಯಾರ್ಯಮಾಽದಿತ್ಯದ್ವಾದಶಾತ್ಮದಿವಾಕರಾಃ |
ಭಾಸ್ಕರಾಹಸ್ಕರಬ್ರಧ್ನಪ್ರಭಾಕರವಿಭಾಕರಾಃ ॥ ೨೮ ॥

---

೨೭. ಮರೀಚಿ, ಅತ್ರಿ, ಮೊದಲಾದ ಸಪ್ತರ್ಷಿಗಳಿಗೆ **चित्र-शिखण्डिनः** (the seven Rishis) ಎಂದು ಹೆಸರು. ಈ ಶಬ್ದವು ಪುಲ್ಲಿಂಗ ಮತ್ತು ಬಹುವಚನ; **सप्तर्षिः** ಎಂದು ಏಕವಚನವೂ ಸಹ ರೂಢಿಯಲ್ಲಿದೆ. ಸಪ್ತರ್ಷಿಗಳು ಯಾರಾರೆಂಬುದನ್ನು ಈ ಶ್ಲೋಕವು ತಿಳಿಸುವುದು—**मरीचिरङ्गिरा अत्रिः पुलस्त्यः पुलहः क्रतुः। वसिष्ठश्चेति सप्तैते ज्ञेयाश्चित्रशिखण्डिनः॥** (Ursa Major, the 7 stars of the constellation).

ಮೇಷಾದಿರಾಶಿಗಳ ಉದಯಕ್ಕೆ **लग्नम्** ಎಂದು ಹೆಸರು (The moment of the sun's entrance into a zodiacal sign) ಮೇಷಾದಿ ರಾಶಿಗಳು ಯಾವುವೆಂದರೆ ಈ ಶ್ಲೋಕವು ತಿಳಿಸುವುದು–**मेषो वृषोऽथ मिथुनं कर्कटः सिंहकन्यके। तुला तु वृश्चिको धन्वी मकरः कुम्भमीनयोः॥** (Signs of the Zodiac).

೨೮-೩೧. **सूरः, सूर्यः, अर्यमा, आदित्यः, द्वादशात्मा, दिवाकरः, भास्करः, अहस्करः, ब्रध्नः, प्रभाकरः, विभाकरः, भास्वान्, विवस्वान्, सप्ताश्वः, हरिदश्वः, उष्णरश्मिः, विकर्तनः, अर्कः, मार्तण्डः, मिहिरः, अरुणः, पूषा, द्युमणिः, तरणिः, मित्रः,**

भास्वद्विवस्वत्सप्ताश्वहरिदश्वोष्णरश्मयः ।
विकर्तनार्कमार्तण्डमिहिरारुणपूषणः ॥ २९ ॥

ಭಾಸ್ವದ್ವಿವಸ್ವತ್ಸಪ್ತಾಶ್ವಹರಿದಶ್ವೋಷ್ಣರಶ್ಮಯಃ ।
ವಿಕರ್ತನಾರ್ಕಮಾರ್ತಂಡಮಿಹಿರಾರುಣಪೂಷಣಃ ॥ ೨೯ ॥

द्युमणिस्तरणिर्मित्रश्चित्रभानुर्विरोचनः ।
विभावसुर्ग्रहपतिस्त्विषांपतिरहर्पतिः ॥ ३० ॥

ದ್ಯುಮಣಿಸ್ತರಣಿರ್ಮಿತ್ರಶ್ಚಿತ್ರಭಾನುರ್ವಿರೋಚನಃ ।
ವಿಭಾವಸುರ್ಗ್ರಹಪತಿಸ್ತ್ವಿಷಾಂಪತಿರಹರ್ಪತಿಃ ॥ ೩೦ ॥

भानुर्हंसः सहस्रांशुस्तपनः सविता रविः ।
(पद्माक्षस्तेजसां राशिश्छायानाथस्तमिस्रहा ।
कर्मसाक्षी जगच्चक्षुर्लोकबन्धुस्त्रयीतनुः ॥

ಭಾನುರ್ಹಂಸಃ ಸಹಸ್ರಾಂಶುಸ್ತಪನಃ ಸವಿತಾ ರವಿಃ ।
(ಪದ್ಮಾಕ್ಷಸ್ತೇಜಸಾಂ ರಾಶಿಶ್ಛಾಯಾನಾಥಸ್ತಮಿಸ್ರಹಾ ।
ಕರ್ಮಸಾಕ್ಷೀ ಜಗಚ್ಚಕ್ಷುರ್ಲೋಕಬಂಧುಸ್ತ್ರಯೀತನುಃ ॥

---

चित्रभानुः, विरोचनः, विभावसुः, ग्रहपतिः, त्विषांपतिः, अहर्पतिः, भानुः, हंसः, सहस्रांशुः, तपनः, सविता, रविः ಈ ೩೭ ಸೂರ್ಯನ ಹೆಸರುಗಳು (The Sun).

(पद्माक्षः, तेजसां राशिः, छायानाथः, तमिस्रहा, कर्मसाक्षी, जगच्चक्षुः, लोकबन्धुः, त्रयीतनुः, प्रद्योतनः, दिनमणिः, खद्योतः, लोकबान्धवः, इनः, भगः, धामनिधिः, अंशुमाली, अब्जिनीपतिः) ಈ ಹೆಚ್ಚಿಗೆಯ ಪಾಠದಲ್ಲಿ ಸೂರ್ಯನಿಗೆ ಇನ್ನೂ ೧೭ ಹೆಸರುಗಳು ಸೇರಿಸಲ್ಪಟ್ಟಿವೆ (Additional names for the Sun).

**प्रद्योतनो दिनमणिः खद्योतो लोकबान्धवः ।**
**इनो भगो धामनिधिश्चांशुमाल्यब्जिनीपतिः ॥)**
**माठरः पिङ्गलो दण्डश्चण्डांशोः पारिपार्श्वकाः ॥ ३१ ॥**

ಪ್ರದ್ಯೋತನೋ ದಿನಮಣಿಃ ಖದ್ಯೋತೋ ಲೋಕಬಾಂಧವಃ ।
ಇನೋ ಭಗೋ ಧಾಮನಿಧಿಶ್ಚಾಂಶುಮಾಲ್ಯಬ್ಜಿನೀಪತಿಃ ॥)
ಮಾಠರಃ ಪಿಂಗಲೋ ದಂಡಶ್ಚಂಡಾಂಶೋಃ ಪಾರಿಪಾರ್ಶ್ವಕಾಃ ॥ ೩೧ ॥

**सूरसूतोऽरुणोऽनूरुः काश्यपिर्गरुडाग्रजः ।**
**परिवेषस्तु परिधिरुपसूर्यकमण्डले ॥ ३२ ॥**

ಸೂರಸೂತೋಽರುಣೋಽನೂರುಃ ಕಾಶ್ಯಪಿರ್ಗರುಡಾಗ್ರಜಃ ।
ಪರಿವೇಷಸ್ತು ಪರಿಧಿರುಪಸೂರ್ಯಕಮಂಡಲೇ ॥ ೩೨ ॥

**किरणोस्रमयूखांशुगभस्तिघृणिरश्मयः ।**
**भानुः करो मरीचिः स्त्रीपुंसयोर्दीधितिः स्त्रियाम् ॥ ३३ ॥**

ಕಿರಣೋಸ್ರಮಯೂಖಾಂಶುಗಭಸ್ತಿಘೃಣಿರಶ್ಮಯಃ ।
ಭಾನುಃ ಕರೋ ಮರೀಚಿಃ ಸ್ತ್ರೀಪುಂಸಯೋರ್ದೀಧಿತಿಃ ಸ್ತ್ರಿಯಾಮ್ ॥ ೩೩ ॥

---

**माठरः, पिङ्गलः, दण्डः** ಈ ೩ ಸೂರ್ಯನ ಪಾರ್ಶ್ವದಲ್ಲಿರುವ ಅಂಗದೇವತೆಗಳ ಹೆಸರು (the Sun's attendants).

೩೨. **सूरसूतः, अरुणः, अनूरुः, काश्यपिः, गरुडाग्रजः,** ಈ ೫ ಸೂರ್ಯನ ಸಾರಥಿಯಾದ ಅರುಣನ ಹೆಸರು (Aruna, the Sun's charioteer, the dawn). **परिवेषः (परिवेशः) परिधिः उपसूर्यकम्, मण्डलम्** ಈ ೪ ಸೂರ್ಯನ (ಮತ್ತು ಚಂದ್ರನ) ಸುತ್ತಲೂ ಕೆಲವು ವೇಳೆ ಕಂಡುಬರುವ ಕುಂಡಲಾಕಾರವಾದ ತೇಜಸ್ಸು (Halo).

೩೩. **किरणः, उस्रः, मयूखः, अंशुः, गभस्तिः, घृणिः,**

स्युः प्रभारुग्रुचिस्त्विड्भाभाश्छविद्युतिदीप्तयः ।
रोचिः शोचिरुभे क्लीबे प्रकाशो द्योत आतपः ॥ ३४॥

ಸ್ಯುಃ ಪ್ರಭಾರುಗ್ರುಚಿಸ್ತ್ವಿಡ್ಭಾಭಾಶ್ಛವಿದ್ಯುತಿದೀಪ್ತಯಃ ।
ರೋಚಿಃ ಶೋಚಿರುಭೇ ಕ್ಲೀಬೇ ಪ್ರಕಾಶೋ ದ್ಯೋತ ಆತಪಃ ॥ ೩೪ ॥

कोष्णं कवोष्णं मन्दोष्णं कदुष्णं त्रिषु तद्वति ।
तिग्मं तीक्ष्णं खरं तद्वन्मृगतृष्णा मरीचिका ॥ ३५॥

॥ इति दिग्वर्गः ॥

ಕೋಷ್ಣಂ ಕವೋಷ್ಣಂ ಮಂದೋಷ್ಣಂ ಕದುಷ್ಣಂ ತ್ರಿಷು ತದ್ವತಿ ।
ತಿಗ್ಮಂ ತೀಕ್ಷ್ಣಂ ಖರಂ ತದ್ವನ್ಮೃಗತೃಷ್ಣಾ ಮರೀಚಿಕಾ ॥ ೩೫ ॥

॥ ಇತಿ ದಿಗ್ವರ್ಗಃ ॥

---

**रश्मिः, भानुः, करः, मरीचिः, दीधितिः** ಈ ೧೧, ಕಿರಣದ ಹೆಸರು (Ray). **मरीचि** ಶಬ್ದವು ಸ್ತ್ರೀಲಿಂಗ ಪುಲ್ಲಿಂಗಗಳೆರಡರಲ್ಲಿಯೂ, **दीधिति** ಶಬ್ದವು ಸ್ತ್ರೀಲಿಂಗದಲ್ಲಿ ಮಾತ್ರ ಎಂದು ತಿಳಿಯಬೇಕು.

೩೪. **प्रभा, रुक्, रुचिः, त्विट्, भा, भाः, छविः, द्युतिः, दीप्तिः, रोचिः, शोचिः** ಈ ೧೧ ಕಾಂತಿ ಅಥವಾ ಬೆಳಕಿಗೆ ಹೆಸರು (Light). **रोचिः, शोचिः** ಎಂಬ ಶಬ್ದಗಳು ಸಾನ್ತ ನಪುಂಸಕವು, ಉಳಿದ ಶಬ್ದಗಳೆಲ್ಲವೂ ಸ್ತ್ರೀಲಿಂಗ.

**प्रकाशः, द्योतः, आतपः** ಈ ೩ ಬಿಸಿಲಿಗೆ ಹೆಸರು (Sun-shine).

೩೫. **कोष्णम्, कवोष्णम्, मन्दोष्णम्, कदुष्णम्** ಈ ೪ ಸ್ವಲ್ಪ ಬಿಸಿಯಾಗಿರುವುದಕ್ಕೆ ಹೆಸರು (Moderate warmth) **तिग्मम्, तीक्ष्णम्, खरम्,** ಈ ೩ ಹೆಚ್ಚು ಬಿಸಿಯಾಗಿರುವುದಕ್ಕೆ ಹೆಸರು (Intense heat). ಈ ೭ ಶಬ್ದಗಳೂ ನಪುಂಸಕಲಿಂಗಗಳು ; ವಿಶೇಷಣಗಳಾದಾಗ ಮಾತ್ರ ವಾಚ್ಯಲಿಂಗಗಳಾಗುವುವು.

## ॥ अथ कालवर्गः ॥

**कालो दिष्टोऽप्यनेहापि समयोऽप्यथ पक्षतिः ।**
**प्रतिपद्वे इमे स्त्रीत्वे तदाद्यास्तिथयो द्वयोः ॥ १ ॥**

॥ ಅಥ ಕಾಲವರ್ಗಃ ॥

ಕಾಲೋ ದಿಷ್ಟೋಽಪ್ಯನೇಹಾಪಿ ಸಮಯೋಽಪ್ಯಥ ಪಕ್ಷತಿಃ ।
ಪ್ರತಿಪದ್ವೇ ಇಮೇ ಸ್ತ್ರೀತ್ವೇ ತದಾದ್ಯಾಸ್ತಿಥಯೋ ದ್ವಯೋಃ ॥ ೧ ॥

**घस्रो दिनाहनी वा तु क्लीबे दिवसवासरौ ।**
**प्रत्यूषोऽहर्मुखं कल्यमुषःप्रत्युषसी अपि ॥ २ ॥**

ಘಸ್ರೋ ದಿನಾಹನೀ ವಾ ತು ಕ್ಲೀಬೇ ದಿವಸವಾಸರೌ ।
ಪ್ರತ್ಯೂಷೋಽಹರ್ಮುಖಂ ಕಲ್ಯಮುಷಃಪ್ರತ್ಯುಷಸೀ ಅಪಿ ॥ ೨ ॥

---

**मृगतृष्णा, मरीचिका** ಈ ೨ "ಬಿಸಿಲು ಕುದುರೆ"ಗೆ ಹೆಸರು. ಮರುಭೂಮಿಯ ಮೇಲೆ ಸೂರ್ಯಕಿರಣಗಳಿಂದುಂಟಾಗುವ ಜಲಭ್ರಾಂತಿ (Mirage, illusory appearance of water in a desert).

೧. **कालः, दिष्टः, अनेहा, समयः** ಈ ೪ ಕಾಲದ ಸಾಮಾನ್ಯಕ್ಕೆ ಹೆಸರು (Time). **अनेहा** ಶಬ್ದವು ಸಾನ್ತವು. **पक्षतिः, प्रतिपत्** ಈ ೨, ಪಕ್ಷದ ಮೊದಲನೆಯ ದಿನ ಎಂದರೆ ಪಾಡ್ಯಕ್ಕೆ ಹೆಸರು (First day of a lunar fortnight). **पक्षतिः** ಎಂದರೆ ಪಕ್ಷದ ಮೂಲವೆಂದು ಅರ್ಥ. ಪಾಡ್ಯವೇ ಮೊದಲಾದ ದಿನಗಳಿಗೆ **तिथयः** ಎಂದೂ, ಒಂದೊಂದು ದಿನಕ್ಕೂ **तिथिः** ಎಂದೂ ಹೆಸರು (Lunar day). ಈ ಶಬ್ದಕ್ಕೆ ಸ್ತ್ರೀಲಿಂಗ ಪುಲ್ಲಿಂಗಗಳೆರಡೂ ಇವೆ.

೨. **घस्रः, दिनम्, अहः, दिवसः, वासरः** ಈ ೫, ಹಗಲಿನ ಹೆಸರು (Day). **दिवस, वासर** ಶಬ್ದಗಳು ಪುಲ್ಲಿಂಗನಪುಂಸಕಲಿಂಗಗಳು ಎರಡೂ ಆಗುತ್ತವೆ. **प्रत्यूषः, अहर्मुखम्, कल्यं, (काल्यं), उषः**

(व्युष्टं विभातं द्वे क्लीबे पुंसि गोसर्ग इष्यते)
प्रभातं च दिनान्ते तु सायं सन्ध्या पितृप्रसूः ।
प्राह्णापराह्णमध्याह्नास्त्रिसंध्यमथ शर्वरी ॥ ३ ॥

(ವ್ಯುಷ್ಟಂ ವಿಭಾತಂ ದ್ವೇ ಕ್ಲೀಬೇ ಪುಂಸಿ ಗೋಸರ್ಗ ಇಷ್ಯತೇ |)
ಪ್ರಭಾತಂ ಚ ದಿನಾಂತೇ ತು ಸಾಯಂ ಸಂಧ್ಯಾ ಪಿತೃಪ್ರಸೂಃ |
ಪ್ರಾಹ್ಣಾಪರಾಹ್ಣಮಧ್ಯಾಹ್ನಾಸ್ತ್ರಿಸಂಧ್ಯಮಥ ಶರ್ವರೀ || ೩ ||

निशा निशीथिनी रात्रिस्त्रियामा क्षणदा क्षपा ।
विभावरीतमस्विन्यौ रजनी यामिनी तमी ॥ ४ ॥

ನಿಶಾ ನಿಶೀಥಿನೀ ರಾತ್ರಿಸ್ತ್ರಿಯಾಮಾ ಕ್ಷಣದಾ ಕ್ಷಪಾ |
ವಿಭಾವರೀತಮಸ್ವಿನ್ಯೌ ರಜನೀ ಯಾಮಿನೀ ತಮೀ || ೪ ||

---

(**ऊषः, उषा**), **प्रत्युषः, प्रभातम्** ಈ ೬, ಮತ್ತು ಹೆಚ್ಚಿಗೆಯು ಪಾಠದಲ್ಲಿ ಇರುವ **व्युष्टम्, विभातम्, गोसर्गः** ಈ ೩, ಪ್ರಾತಃಕಾಲಕ್ಕೆ ಹೆಸರು (Morning). **प्रत्यूष** ಶಬ್ದವು ಅಕಾರಾಂತ; ಇದು ಪುಲ್ಲಿಂಗ ಮತ್ತು ನಪುಂಸಕಲಿಂಗವೂ ಆಗಿರುವುದು.

೩. **दिनान्तः, सायम्** (**सायः**), **सन्ध्या, पितृप्रसूः** ಈ ೪ ಸಾಯಂಕಾಲದ ಹೆಸರು (Evening). **सायम्** ಎಂಬುದು ನಪುಂಸಕ ಲಿಂಗ ಮತ್ತು ಅವ್ಯಯವೂ ಆಗುವುದು. **सायः** ಎಂದು ಅಕಾರಾಂತ ಪುಲ್ಲಿಂಗ ಶಬ್ದವು ಇದೆ.

**त्रिसन्ध्यम्** ಎಂಬುದು **प्राह्ण** (ಹಗಲಿನ ಆದಿಭಾಗ), **अपराह्ण** (ಹಗಲಿನ ಕಡೆಯಭಾಗ), **मध्याह्न** (ಹಗಲಿನ ಮಧ್ಯಭಾಗ) ಈ ಮೂರನ್ನು ಒಟ್ಟಿಗೆ ಸೂಚಿಸುವ ಒಂದೇ ಪದ (One word to denote the three periods of the day viz. morning, noon and after-noon).

೪. **शर्वरी, निशा, निशीथिनी, रात्रिः, त्रियामा, क्षणदा,**

तमिस्रा तामसी रात्रिर्ज्यौत्स्नी चन्द्रिकयाऽन्विता ।
आगामिवर्तमानाहर्युक्तायां निशि पक्षिणी ॥ ५ ॥

ತಮಿಸ್ರಾ ತಾಮಸೀ ರಾತ್ರಿರ್ಜ್ಯೌತ್ಸ್ನೀ ಚಂದ್ರಿಕಯಾಽನ್ವಿತಾ ।
ಆಗಾಮಿವರ್ತಮಾನಾಹರ್ಯುಕ್ತಾಯಾಂ ನಿಶಿ ಪಕ್ಷಿಣೀ ॥ ೫ ॥

गणरात्रं निशा बह्व्यः प्रदोषो रजनीमुखम् ।
अर्धरात्रनिशीथौ द्वौ द्वौ यामप्रहरौ समौ ॥ ६ ॥

ಗಣರಾತ್ರಂ ನಿಶಾ ಬಹ್ವ್ಯಃ ಪ್ರದೋಷೋ ರಜನೀಮುಖಮ್ ।
ಅರ್ಧರಾತ್ರನಿಶೀಥೌ ದ್ವೌ ದ್ವೌ ಯಾಮಪ್ರಹರೌ ಸಮೌ ॥ ೬ ॥

---

**क्षपा, विभावरी, तमस्विनी, रजनी, यामिनी, तमी** ಈ ೧೨ ರಾತ್ರಿಯ ಹೆಸರುಗಳು (Night).

೫. ಕತ್ತಲೆಯಿಂದ ಕೂಡಿರುವ ರಾತ್ರಿಗೆ (Dark night) **तमिस्रा** ಎಂದೂ, ಬೆಳುದಿಂಗಳೊಂದಿಗೆ ಕೂಡಿದ ರಾತ್ರಿಗೆ (Moon-light night) **ज्यौत्स्नी** ಎಂದೂ ಹೆಸರು.

ಇಂದಿನ ಮತ್ತು ನಾಳೆಯ ಹಗಲುಗಳು ಮತ್ತು ಅವುಗಳ ಮಧ್ಯೆ ಇರುವ ರಾತ್ರಿಗೆ **पक्षिणी** ಎಂದು ಹೆಸರು ; ಎಂದರೆ ಎರಡು ಹಗಲುಗಳು ಮತ್ತು ಒಂದು ರಾತ್ರಿಯುಷ್ಟು ಕಾಲ (A night with the two days enclosing it).

೬. ಅನೇಕ ರಾತ್ರಿಗಳ ಸಮುದಾಯಕ್ಕೆ **गणरात्रम्** ಎಂದು ಹೆಸರು (Many nights taken together). **प्रदोषः, रजनीमुखम्** ಈ ೨ ಪ್ರದೋಷ ಅಥವಾ ರಾತ್ರಿಯ ಪ್ರಾರಂಭಕಾಲಕ್ಕೆ ಹೆಸರು (The first part of the night or evening).

**अर्धरात्रः, निशीथः** ಈ ೨ ಪದಗಳು ಮಧ್ಯರಾತ್ರಿಯ ಹೆಸರು (Mid-night). **यामः, प्रहरः** ಈ ೨ ಪದಗಳು, ಒಂದು ಜಾವ ಹೊತ್ತಿಗೆ ಹೆಸರು (A watch of three hours ; the 8th part of a day).

**स पर्वसंधिः प्रतिपत्पञ्चदश्योर्यदन्तरम् ।**
**पक्षान्तौ पञ्चदश्यौ द्वे पौर्णमासी तु पूर्णिमा ॥ ७ ॥**

ಸ ಪರ್ವಸಂಧಿಃ ಪ್ರತಿಪತ್ಪಂಚದಶ್ಯೋರ್ಯದಂತರಮ್ ।
ಪಕ್ಷಾಂತೌ ಪಂಚದಶ್ಯೌ ದ್ವೇ ಪೌರ್ಣಮಾಸೀ ತು ಪೂರ್ಣಿಮಾ ॥ ೭ ॥

**कलाहीने सानुमतिः पूर्णे राका निशाकरे ।**
**अमावास्या त्वमावस्या दर्शः सूर्येन्दुसंगमः ॥ ८ ॥**

ಕಲಾಹೀನೇ ಸಾನುಮತಿಃ ಪೂರ್ಣೇ ರಾಕಾ ನಿಶಾಕರೇ ।
ಅಮಾವಾಸ್ಯಾ ತ್ವಮಾವಸ್ಯಾ ದರ್ಶಃ ಸೂರ್ಯೇಂದುಸಂಗಮಃ ॥ ೮ ॥

---

೭. **पर्व** (ನಪುಂಸಕ ಶಬ್ದ) ಎಂದರೆ ಹುಣ್ಣಿಮೆಪಾಡ್ಯಗಳ ಮಧ್ಯ ಕಾಲ ಅಥವಾ ಅಮಾವಾಸ್ಯೆಪಾಡ್ಯಗಳ ಮಧ್ಯಕಾಲವಾದ ಸಂಧಿಗೆ ಹೆಸರು (The junction of the 15th and the first day of a lunar fortnight). **पर्व, सन्धिः** ಎಂದು ೨ ಬೇರೆ ಬೇರೆ ಪದಗಳಾಗಿಯೂ ಮತ್ತು **पर्वसन्धिः** ಎಂದು ಒಂದೇ ಪದವಾಗಿಯೂ ಪ್ರಯೋಗವುಂಟು.

**पक्षान्तौ** (ಪುಲ್ಲಿಂಗ ದ್ವಿವಚನ) **पञ्चदश्यौ** (ಸ್ತ್ರೀಲಿಂಗ ದ್ವಿವಚನ) ಈ ೨, ಪಕ್ಷದ ಅಂತವಾದ ಪೂರ್ಣಿಮಾಮಾವಾಸ್ಯೆಗಳಿಗೆ ಒಂದು ಹೆಸರು (New and full moon days). **पौर्णमासी, पूर्णिमा** ಈ ೨ ಪೂರ್ಣಿಮಾ ಅಥವಾ ಹುಣ್ಣಿಮೆಗೆ ಹೆಸರು (Full moon day).

೮. ಚಂದ್ರೋದಯ ಕಾಲದಲ್ಲಿ ಚತುರ್ದಶೀ ಅಥವಾ ಪಾಡ್ಯದ ಸಂಬಂಧವಾಗಿ ಒಂದು ಕಲೆ ಕಡಿಮೆಯಾಗಿದ್ದ ಹುಣ್ಣಿಮೆಗೆ (Day of full moon with one digit less) **अनुमतिः** ಎಂದೂ, ಕಲೆಗಳೆಲ್ಲವೂ ಪೂರ್ಣವಾಗಿರುವ ಚಂದ್ರನಿಂದ ಕೂಡಿರುವ ಹುಣ್ಣಿಮೆಗೆ (Day of the full moon with all the digits full and perfect) **राका** ಎಂದೂ ಹೆಸರು.

सा दृष्टेन्दुः सिनीवाली सा नष्टेन्दुकला कुहूः ।
उपरागो ग्रहो राहुग्रस्ते त्विन्दौ च पूष्णि च ॥ ९ ॥

ಸಾ ದೃಷ್ಟೇಂದುಃ ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂಃ ।
ಉಪರಾಗೋ ಗ್ರಹೋ ರಾಹುಗ್ರಸ್ತೇ ತ್ವಿಂದೌ ಚ ಪೂಷ್ಣಿ ಚ ॥ ೯ ॥

सोपप्लवोपरक्तौ द्वावग्न्युत्पात उपाहितः ।
एकयोक्त्या पुष्पवन्तौ दिवाकरनिशाकरौ ॥ १० ॥

ಸೋಪಪ್ಲವೋಪರಕ್ತೌ ದ್ವಾವಗ್ನ್ಯುತ್ಪಾತ ಉಪಾಹಿತಃ ।
ಏಕಯೋಕ್ತ್ಯಾ ಪುಷ್ಪವಂತೌ ದಿವಾಕರನಿಶಾಕರೌ ॥ ೧೦ ॥

---

**अमावास्या, अमावस्या, दर्शः, सूर्येन्दुसंगमः** ಈ ೪ ಅಮಾವಾಸ್ಯೆಗೆ ಹೆಸರು (New moon day).

೯. ಚಂದ್ರನ ಕಲೆ ಅತಿ ಸೂಕ್ಷ್ಮವಾಗಿ ಕಾಣಿಸುವ ಅಮಾವಾಸ್ಯೆಗೆ (The first day of the new moon when it rises with a scarcely visible crescent) **सिनीवाली** ಎಂದೂ, ಚಂದ್ರನ ಕಲೆ ಸ್ವಲ್ಪವೂ ಕಾಣಿಸದೆಯೇ ಇರುವ ಅಮಾವಾಸ್ಯೆಗೆ (The first day of the new moon on which the moon is not visible at all) **कुहूः** ಎಂದೂ ಹೆಸರು.

**उपरागः, ग्रहः** ಈ ೨ ಗ್ರಹಣದ ಹೆಸರು (Eclipse). ಸೂರ್ಯ ಚಂದ್ರ ಬಿಂಬಗಳು ರಾಹುಗ್ರಸ್ತವಾಗುವಿಕೆ (Seizure of the sun or moon by Rahu or the dragon's head).

೧೦. **सोपप्लवः, उपरक्तः** ಈ ೨ ಗ್ರಹಣ ಹಿಡಿದಿರುವ ಚಂದ್ರನ ಅಥವಾ ಸೂರ್ಯನ ಬಿಂಬವು (Eclipsed Sun or Moon). **अग्न्युत्पातः, उपाहितः** ಈ ೨ ಧೂಮಕೇತುವಿನ ಹೆಸರು (Meteor or Comet).

**अष्टादश निमेषास्तु काष्ठा त्रिंशत्तु ताः कला ।**
**तास्तु त्रिंशत्क्षणस्ते तु मुहूर्तो द्वादशास्त्रियाम् ॥११॥**

ಅಷ್ಟಾದಶ ನಿಮೇಷಾಸ್ತು ಕಾಷ್ಠಾ ತ್ರಿಂಶತ್ತು ತಾಃ ಕಲಾ |
ತಾಸ್ತು ತ್ರಿಂಶತ್ ಕ್ಷಣಸ್ತೇ ತು ಮುಹೂರ್ತೋ ದ್ವಾದಶಾಸ್ತ್ರಿಯಾಮ್ ||೧೧||

**ते तु त्रिंशदहोरात्रः पक्षस्ते दश पञ्च च ।**
**पक्षौ पूर्वापरौ शुक्लकृष्णौ मासस्तु तावुभौ ॥ १२ ॥**

ತೇ ತು ತ್ರಿಂಶದಹೋರಾತ್ರಃ ಪಕ್ಷಸ್ತೇ ದಶ ಪಂಚ ಚ |
ಪಕ್ಷೌ ಪೂರ್ವಾಪರೌ ಶುಕ್ಲಕೃಷ್ಣೌ ಮಾಸಸ್ತು ತಾವುಭೌ || ೧೨ ||

---

**पुष्पवन्तौ** ಎಂಬ ದ್ವಿವಚನ ಪದವು ಸೂರ್ಯ ಚಂದ್ರರನ್ನು ಒಂದೇ ಮಾತಿನಿಂದ ತಿಳಿಸತಕ್ಕ ತಕಾರಾಂತ ಅಥವಾ ಅಕಾರಾಂತ ಶಬ್ದವು (One word to signify the sun and the moon together). ಪ್ರತ್ಯೇಕವಾಗಿ **पुष्पवान्** ಎಂದಾಗಲಿ ಅಥವಾ **पुष्पवन्तः** ಎಂದಾಗಲಿ ಏಕವಚನ ಪ್ರಯೋಗಮಾಡಬಾರದು.

೧೧. ಹದಿನೆಂಟುಸಾರಿ ರೆಪ್ಪೆ ಆಡಿಸುವಷ್ಟು ಹೊತ್ತಿಗೆ (Time equal to 18 winks) [1]**काष्ठा** ಎಂದು ಹೆಸರು. ಅಂತಹ ಕಾಷ್ಠಗಳು ೩೦ ಆದರೆ (Time equal to 30 Kashtas) **कला** ಎಂದೂ, ಅಂತಹ ಕಲೆಗಳು ೩೦ ಆದರೆ (Time of 30 Kalas) **क्षणः** ಎಂದೂ, ಅಂತಹ ಕ್ಷಣಗಳು ೧೨ ಆದರೆ (Time of 12 Kshanas) **मुहूर्तः** ಎಂದೂ ಹೆಸರು. **मुहूर्त** ಶಬ್ದವು ಪುಂನಪುಂಸಕ ಲಿಂಗ.

೧೨. ಮೂವತ್ತು ಮುಹೂರ್ತಗಳಿಗೆ, ಎಂದರೆ ರಾತ್ರಿ ಹಗಲು ಸೇರಿದ ಒಂದು ಪೂರ್ತಿ ದಿನಕ್ಕೆ (A day and night having 24

---

1. **काष्ठा** = Time equal to 18 winks or moments; **कला**= a period of 8 Seconds; **क्षणः** = a period of 4 minutes; **मुहूर्तः**= a period of 48 minutes or 30th part of a day.

द्वौ द्वौ मार्गादिमासौ स्यादृतुस्तैरयनं त्रिभिः ।
अयने द्वे गतिरुदग्दक्षिणार्कस्य वत्सरः ॥ १३ ॥

ದ್ವೌ ದ್ವೌ ಮಾರ್ಗಾದಿಮಾಸೌ ಸ್ಯಾದೃತುಸ್ತೈರಯನಂ ತ್ರಿಭಿಃ ।
ಅಯನೇ ದ್ವೇ ಗತಿರುದಗ್ದಕ್ಷಿಣಾರ್ಕಸ್ಯ ವತ್ಸರಃ ॥ ೧೩ ॥

समरात्रिंदिवे काले विषुवद्विषुवं च तत् ।
(पुष्ययुक्ता पौर्णमासी पौषी मासे तु यत्र सा ।
नाम्ना स पौषो माघाद्याश्चैवमेकादशापरे ॥)
मार्गशीर्षे सहा मार्ग आग्रहायणिकश्च सः ॥ १४ ॥

ಸಮರಾತ್ರಿಂದಿವೇ ಕಾಲೇ ವಿಷುವದ್ವಿಷುವಂ ಚ ತತ್ ॥
(ಪುಷ್ಯಯುಕ್ತಾ ಪೌರ್ಣಮಾಸೀ ಪೌಷೀ ಮಾಸೇ ತು ಯತ್ರ ಸಾ ॥
ನಾಮ್ನಾ ಸ ಪೌಷೋ ಮಾಘಾದ್ಯಾಶ್ಚೈವಮೇಕಾದಶಾಪರೇ ॥
ಮಾರ್ಗಶೀರ್ಷೇ ಸಹಾ ಮಾರ್ಗ ಆಗ್ರಹಾಯಣಿಕಶ್ಚ ಸಃ ॥ ೧೪ ॥

---

hours) [1]**अहोरात्रः** ಎಂದೂ, ೧೫ ಅಹೋರಾತ್ರಿಗಳಿಗೆ (A fortnight) **पक्षः** ಎಂದೂ ಹೆಸರು. ಪಕ್ಷವು ೨ ವಿಧ. **शुक्लः** (The light half of a month), **कृष्णः** (The dark half of a month) ಎಂದು, ಪೂರ್ವಪಕ್ಷ ಮತ್ತು ಅಪರಪಕ್ಷಗಳಿಗೆ ಕ್ರಮವಾಗಿ ಹೆಸರು. ಈ ೨ ಪಕ್ಷಗಳೂ ಸೇರಿದ ಒಂದು ತಿಂಗಳಿಗೆ (A month) **मासः** ಎಂದು ಹೆಸರು.

೧೩. ಮಾರ್ಗಶೀರ್ಷ ಮೊದಲಾದ ಮಾಸಗಳು ಎರಡೆರಡು ಸೇರಿದ ಒಂದು ಋತು **ऋतुः** ಎನಿಸುವುದು (Season, a period of two months) ಅಂತಹ ಋತುಗಳು ೩ ಕೂಡಿದ ೧ ಅಯನವು, **अयनम्** ಎನಿಸುವುದು (A half year). ಅಂತಹ ಅಯನಗಳು ೨, ಎಂದರೆ

---

1. **अहोरात्रः** = 30 Muhurtas or a day and night ; **पक्षः** = 15 Ahoratras or 15 days and nights.

**पौषे तैषसहस्यौ द्वौ तपा माघेऽथ फाल्गुने ।**
**स्यात्तपस्यः फाल्गुनिकः स्याच्चैत्रे चैत्रिको मधुः ॥ १५ ॥**

ಪೌಷೇ ತೈಷಸಹಸ್ಯೌ ದ್ವೌ ತಪಾ ಮಾಘೇಽಥ ಫಾಲ್ಗುನೇ |
ಸ್ಯಾತ್ತಪಸ್ಯಃ ಫಾಲ್ಗುನಿಕಃ ಸ್ಯಾಚ್ಚೈತ್ರೇ ಚೈತ್ರಿಕೋ ಮಧುಃ || ೧೫ ||

---

ಉತ್ತರಾಯಣ ದಕ್ಷಿಣಾಯನಗಳು ಸೇರಿದ ಒಂದು ವರ್ಷವು, **वत्सरः** ಎನಿಸುವುದು (A year). ಸೂರ್ಯನ ಗತಿ ಉತ್ತರದಕಡೆಗೆ ಇರುವ ೬ ತಿಂಗಳ ಕಾಲಕ್ಕೆ ಉತ್ತರಾಯಣವೆಂದೂ, ದಕ್ಷಿಣದಕಡೆ ಇರುವ ೬ ತಿಂಗಳು ಕಾಲಕ್ಕೆ ದಕ್ಷಿಣಾಯನವೆಂದೂ ಹೆಸರು.

ಈ ಶ್ಲೋಕದಲ್ಲಿ "**द्वौ द्वौ मघादिमासौ**" ಎಂದೂ ಪಾಠವಿದೆ.

೧೪. **विषुवत्, विषुवम्** ಈ ೨, ರಾತ್ರಿಹಗಲುಗಳು ಸಮವಾಗಿರುವ ಕಾಲಕ್ಕೆ ಹೆಸರು (The Equinox). (ತುಲಾ ಸಂಕ್ರಾಂತಿ, ಮೇಷ ಸಂಕ್ರಾಂತಿಗಳಲ್ಲಿ ರಾತ್ರಿ ಹಗಲುಗಳು ಸಮವಾಗಿರುತ್ತವೆ).

ಪುಷ್ಯನಕ್ಷತ್ರದಿಂದ ಕೂಡಿರುವ ಹುಣ್ಣಿಮೆಗೆ (The day of the full moon when the moon is in the asterism Pushya) **पौषी** ಎಂದೂ, ಅಂತಹ ಹುಣ್ಣಿಮೆಯಿಂದ ಕೂಡಿದ ಮಾಸಕ್ಕೆ ಎಂದರೆ ಪುಷ್ಯಮಾಸಕ್ಕೆ (The month having such a full moon day) **पौषः** ಎಂದೂ, ಹೀಗೆಯೇ ಇತರ ೧೧ ತಿಂಗಳುಗಳ ಹೆಸರುಗಳನ್ನು ತಿಳಿಯಬೇಕು. ಮಘ (ಮಖ) ನಕ್ಷತ್ರದ ಹುಣ್ಣಿಮೆಯ ಮಾಸವು ಮಾಘ ಮಾಸವು. ಈ ರೀತಿಯಾಗಿಯೇ ಇತರ ಮಾಸಗಳ ಹೆಸರು (Similarly other months take their names after the constellations through which the moon passes).

**मार्गशीर्षः, सहाः, मार्गः, आग्रहायणिकः** ಈ ೪ ಮಾರ್ಗಶೀರ್ಷ ಮಾಸದ ಹೆಸರು (Margasirsha). **सहाः** ಎಂಬುದು ಸಾಂತ ಶಬ್ದವು.

೧೫. **पौषः, तैषः, सहस्यः** ಈ ೩ ಪುಷ್ಯಮಾಸಕ್ಕೆ ಹೆಸರು

**वैशाखे माधवो राधो ज्येष्ठे शुक्रः शुचिस्त्वयम् ।**
**आषाढे श्रावणे तु स्यान्नभाः श्रावणिकश्च सः ॥ १६ ॥**

ವೈಶಾಖೇ ಮಾಧವೋ ರಾಧೋ ಜ್ಯೇಷ್ಠೇ ಶುಕ್ರಃ ಶುಚಿಸ್ತ್ವಯಮ್ ।
ಆಷಾಢೇ ಶ್ರಾವಣೇ ತು ಸ್ಯಾನ್ನಭಾಃ ಶ್ರಾವಣಿಕಶ್ಚ ಸಃ ॥ ೧೬ ॥

**स्युर्नभस्यप्रौष्ठपदभाद्रभाद्रपदाः समाः ।**
**स्यादाश्विन इषोऽप्याश्वयुजोऽपि स्यात्तु कार्तिके ॥१७॥**

ಸ್ಯುರ್ನಭಸ್ಯಪ್ರೌಷ್ಠಪದ ಭಾದ್ರ ಭಾದ್ರಪದಾಃ ಸಮಾಃ ।
ಸ್ಯಾದಾಶ್ವಿನ ಇಷೋಽಪ್ಯಾಶ್ವಯುಜೋಽಪಿ ಸ್ಯಾತ್ತು ಕಾರ್ತಿಕೇ ॥ ೧೭ ॥

**बाहुलोर्जौ कार्तिकिको हेमन्तः शिशिरोऽस्त्रियाम् ।**
**वसन्ते पुष्पसमयः सुरभिर्ग्रीष्म ऊष्मकः ॥ १८ ॥**

ಬಾಹುಲೋರ್ಜೌ ಕಾರ್ತಿಕಿಕೋ ಹೇಮಂತಃ ಶಿಶಿರೋಽಸ್ತ್ರಿಯಾಮ್ ।
ವಸಂತೇ ಪುಷ್ಪಸಮಯಃ ಸುರಭಿರ್ಗ್ರೀಷ್ಮ ಊಷ್ಮಕಃ ॥ ೧೮ ॥

---

(Pushya). **तपाः, माघः** ಈ ೨ ಮಾಘಮಾಸಕ್ಕೆ (Magha), **फाल्गुनः, तपस्यः, फाल्गुनिकः** ಈ ೩ ಫಾಲ್ಗುಣಮಾಸಕ್ಕೆ (Phalguna), **चैत्रः, चैत्रिकः, मधुः** ಈ ೩ ಚೈತ್ರ ಮಾಸಕ್ಕೆ (Chaitra) ಹೆಸರುಗಳು. **तपाः** ಎಂಬುದು ಸಾಂತ ಶಬ್ದವು.

೧೬. **वैशाखः, माधवः, राधः** ಈ ೩ ವೈಶಾಖಮಾಸಕ್ಕೆ (Vaisakha), **ज्येष्ठः, शुक्रः** ಈ ೨ ಜ್ಯೇಷ್ಠಮಾಸಕ್ಕೆ (Jyeshta) **शुचिः, आषाढः** ಈ ೨ ಆಷಾಢಮಾಸಕ್ಕೆ (Ashadha), **श्रावणः, नभाः** (ಸಾಂತವು), ಈ ೨ ಶ್ರಾವಣಮಾಸಕ್ಕೆ (Sravana) ಹೆಸರುಗಳು.

೧೭-೧೮. **नभस्यः, प्रौष्ठपदः, भाद्रः, भाद्रपदः** ಈ ೪ ಭಾದ್ರಪದಮಾಸಕ್ಕೆ (Bhadrapada), **आश्विनः, इषः, आश्वयुजः** ಈ ೩ ಆಶ್ವಯುಜಮಾಸಕ್ಕೆ (Ashvayuja) ಹೆಸರುಗಳು.

निदाघ उष्णोपगम उष्ण ऊष्मागमस्तपः ।

स्त्रियां प्रावृट् स्त्रियां भूम्नि वर्षा अथ शरत्स्त्रियाम् ॥१९॥

ನಿದಾಘ ಉಷ್ಣೋಪಗಮ ಉಷ್ಣ ಊಷ್ಮಾಗಮಸ್ತಪಃ ।

ಸ್ತ್ರಿಯಾಂ ಪ್ರಾವೃಟ್ ಸ್ತ್ರಿಯಾಂ ಭೂಮ್ನಿ ವರ್ಷಾ ಅಥ ಶರತ್ ಸ್ತ್ರಿಯಾಮ್॥೧೯॥

षडमी ऋतवः पुंसि मार्गादीनां युगैः क्रमात् ।

संवत्सरो वत्सरोऽब्दो हायनोऽस्त्री शरत्समाः ॥ २० ॥

ಷಡಮೀ ಋತವಃ ಪುಂಸಿ ಮಾರ್ಗಾದೀನಾಂ ಯುಗೈಃ ಕ್ರಮಾತ್ ।

ಸಂವತ್ಸರೋ ವತ್ಸರೋಽಬ್ದೋ ಹಾಯನೋಽಸ್ತ್ರೀ ಶರತ್ಸಮಾಃ ॥ ೨೦ ॥

---

**कार्तिकः, बाहुलः, ऊर्जः, कार्तिकिकः** ಈ ೪ ಕಾರ್ತಿಕಮಾಸಕ್ಕೆ ಹೆಸರು (Kartika).

**हेमन्तः, शिशिरः** ಇವು ಕ್ರಮವಾಗಿ ಹೇಮಂತ ಶಿಶಿರ ಋತುಗಳ ಹೆಸರುಗಳು. **हेमन्त** (Hemanta, the cold season or winter) **शिशिर** (Sisira, the cool or dewy season) ಶಬ್ದಗಳಿಗೆ ಪುಲ್ಲಿಂಗ ನಪುಂಸಕಲಿಂಗಗಳೆರಡೂ ಉಂಟು.

೧೮-೧೯. **वसन्तः, पुष्पसमयः, सुरभिः** ಈ ೩ ವಸಂತ ಋತುವಿಗೂ (Spring), **ग्रीष्मः, ऊष्मकः, (उष्मकः), निदाघः, उष्णोपगमः, उष्णः, ऊष्मागमः, तपः** ಈ ೭ ಗ್ರೀಷ್ಮ ಋತುವಿಗೂ (Grishma, the summer season) ಹೆಸರು. **तपः** ಎಂಬುದು ಇಲ್ಲಿ ಅಕಾರಾಂತ ಪುಲ್ಲಿಂಗ ಶಬ್ದ.

**प्रावृट्, वर्षाः** ಈ ೨ ವರ್ಷಋತುವಿನ ಹೆಸರು (Rainy season) **प्रावृट्** ಶಬ್ದವು ಷಕಾರಾಂತ ಸ್ತ್ರೀಲಿಂಗ, **वर्षा** ಶಬ್ದವು ಸ್ತ್ರೀಲಿಂಗ ಮತ್ತು ನಿತ್ಯಬಹುವಚನಾಂತ. **शरत्** ಎಂಬುದು ದಕಾರಾಂತ ಸ್ತ್ರೀಲಿಂಗ ಶಬ್ದ. ಇದು ಶರದೃತುವಿಗೆ ಹೆಸರು (Autumn).

೨೦. ಈ ಮೇಲೆ ಹೇಳಿರುವ ಹೇಮಂತ ಮೊದಲಾದ ೬ ಋತುಗಳು

मासेन स्यादहोरात्रः पैत्रो वर्षेण दैवतः ।
(दिव्यैर्वर्षसहस्रैर्द्वादशभिर्दैवतं युगम् ।)
दैवे युगसहस्रे द्वे ब्राह्मः कल्पौ तु तौ नृणाम् ॥ २१ ॥

ಮಾಸೇನ ಸ್ಯಾದಹೋರಾತ್ರಃ ಪೈತ್ರೋ ವರ್ಷೇಣ ದೈವತಃ ।
(ದಿವ್ಯೈರ್ವರ್ಷಸಹಸ್ರೈರ್ದ್ವಾದಶಭಿರ್ದೈವತಂ ಯುಗಮ್ ।)
ದೈವೇ ಯುಗಸಹಸ್ರೇ ದ್ವೇ ಬ್ರಾಹ್ಮಃ ಕಲ್ಪೌ ತು ತೌ ನೃಣಾಮ್ ॥ ೨೧ ॥

---

(the 6 seasons) **ऋतवः** ಎನಿಸಿಕೊಳುತ್ತವೆ. ಮಾರ್ಗಶೀರ್ಷಮಾಸದಿಂದ ಮೊದಲುಗೊಂಡು ಕ್ರಮವಾಗಿ ಎರಡೆರಡು ತಿಂಗಳು ಕೂಡಿದ ಕಾಲಕ್ಕೆ **ऋतु** ಎಂದು ಹೆಸರು. **ऋतु** ಶಬ್ದವು ಪುಲ್ಲಿಂಗದಲ್ಲಿರುವುದು.

**संवत्सरः, वत्सरः, अब्दः, हायनः, शरत्, समाः** ಈ ೬ ಸಂವತ್ಸರಕ್ಕೆ ಹೆಸರು (Year). **हायन** ಶಬ್ದವು ಪುಂನಪುಂಸಕವು. **समाः** ಎಂಬುದು ಸ್ತ್ರೀಲಿಂಗ ಮತ್ತು ಬಹುವಚನವು; ಏಕವಚನಪ್ರಯೋಗವೂ ಇದೆ.

೨೧. [1]ಮನುಷ್ಯರ ೧ ತಿಂಗಳು ಪಿತೃಗಳಿಗೆ ೧ ಪೂರ್ತಿ ದಿನ **पैत्रोऽहोरात्रः** ಎನಿಸುವುದು. ಹಾಗೆಯೇ ಮನುಷ್ಯರ ೧ ವರ್ಷ, ದೇವತೆಗಳ ೧ ಪೂರ್ತಿ ದಿನ **दैवतोऽहोरात्रः** ಎನಿಸುವುದು. ದೇವತೆಗಳ ೧೨೦೦೦ ವರ್ಷಗಳು **दैवतंयुगम्** ಎನಿಸುವುದು. ಅಂತಹ ದೈವಯುಗವು ೨

---

1. ಮನುಷ್ಯರ ಕಾಲಮಾನಕ್ಕೂ ಬ್ರಹ್ಮನಪರ್ಯಂತ ದೈವಮಾನಕ್ಕೂ ಇರುವ ಅಂತರವನ್ನು ಕೆಳಗೆ ಕೊಟ್ಟಿರುವ ಪಟ್ಟಿಯಿಂದ ತಿಳಿಯಬಹುದು. ಅದರ ವಿವರಣೆ ಹೇಗೆಂದರೆ—ಮನುಷ್ಯರ ೧ ತಿಂಗಳು ಪಿತೃಗಳ ೧ ದಿನ (ಹಗಲು ರಾತ್ರಿ ಸೇರಿ). ನಮ್ಮ ಶುಕ್ಲಪಕ್ಷ ಅವರ ಹಗಲು. ನಮ್ಮ ಕೃಷ್ಣಪಕ್ಷ ಅವರ ರಾತ್ರಿ. ನಮ್ಮ ೧ ವರ್ಷ ದೇವತೆಗಳಿಗೆ ೧ ದಿನ; ನಮ್ಮ ಉತ್ತರಾಯಣ ಅವರ ಹಗಲು, ನಮ್ಮ ದಕ್ಷಿಣಾಯನ ಅವರ ರಾತ್ರಿ. ಅಂತೂ ಮನುಷ್ಯಮಾನಕ್ಕಿಂತ ಪಿತೃಮಾನ ೩೦ರಷ್ಟು ಹೆಚ್ಚು. ಅದಕ್ಕಿಂತಲೂ ೧೨ರಷ್ಟು ಹೆಚ್ಚಾಗಿರುವುದು ದೈವಮಾನ. ಆದುದರಿಂದ ೩೦×೧೨×೩೦×೧೨=೧,೨೯,೬೦೦ ಮಾನವ ದಿನಗಳಿಗೆ ದೇವತೆಗಳ ೧ ವರ್ಷ. ಅಂತಹ ವರ್ಷಗಳು ೧೨೦೦೦ವಾದರೆ ದೇವತೆಗಳಿಗೆ ೧ ಯುಗ.

**मन्वन्तरं तु दिव्यानां युगानामेकसप्ततिः ।**
**संवर्तः प्रलयः कल्पः क्षयः कल्पान्त इत्यपि ॥ २२ ॥**

ಮನ್ವನ್ತರಂ ತು ದಿವ್ಯಾನಾಂ ಯುಗಾನಾಮೇಕಸಪ್ತತಿಃ ।
ಸಂವರ್ತಃ ಪ್ರಲಯಃ ಕಲ್ಪಃ ಕ್ಷಯಃ ಕಲ್ಪಾನ್ತ ಇತ್ಯಪಿ ॥ ೨೨ ॥

---

ಸಹಸ್ರವಾದರೆ ಅದಕ್ಕೆ **ब्राह्मोऽहोरात्रः** (ಬ್ರಹ್ಮನ ಒಂದು ಪೂರ್ತಿದಿನ) ಎನಿಸುವುದು. ಮನುಷ್ಯರಿಗೆ ಅದೇ ೨ ಕಲ್ಪಗಳು (ಸ್ಥಿತಿ ಪ್ರಲಯಕಾಲಗಳು) **कल्पौ** ಎನಿಸುವುದು.

೨೨. ದೇವಯುಗಗಳು ೭೧ ಆಗುವಷ್ಟು ಕಾಲಕ್ಕೆ **मन्वन्तरम्** ಎಂದು ಹೆಸರು (Period of Manu, i.e. 71 ages of gods). **संवर्तः, प्रलयः, कल्पः, क्षयः, कल्पान्तः** ಈ ೫ ಪ್ರಪಂಚದ ಪ್ರಲಯಕ್ಕೆ ಹೆಸರು (Destruction of the world).

---

ಅಂತಹ ದೇವಯುಗಗಳು ೨೦೦೦ ವಾದರೆ ಬ್ರಹ್ಮನಿಗೆ ೧ ಅಹೋರಾತ್ರಿ ಅಥವಾ ಮನುಷ್ಯರಿಗೆ ೨ ಕಲ್ಪಗಳು— ಒಂದು ಕಲ್ಪ ಬ್ರಹ್ಮನ ೧ ಹಗಲು; ಅದೇ ಈ ಜಗತ್ತಿನ ಸ್ಥಿತಿಕಲ್ಪವೆಂದೂ, ಮತ್ತೊಂದು ಕಲ್ಪ ಬ್ರಹ್ಮನ ೧ ರಾತ್ರಿ, ಅದೇ ಈ ಜಗತ್ತಿನ ಕ್ಷಯಕಲ್ಪವೆಂದೂ ಹೆಸರು. ಆದುದರಿಂದ ೧ ಮಾನವ ಕಲ್ಪವೆಂದರೆ ೪೩೨ ಕೋಟಿ ಮಾನವ ವರ್ಷಗಳು.

| | | |
|---|---|---|
| 1 month of mortals | = | a day and night of Pitris. |
| 1 year of mortals | = | a day and night of the gods. |
| 12,000 years of gods | = | an age or yuga of gods. |
| 2,000 Ages or yugas of gods | = | a day and night of Brahma or 2 Kalpas of mortals |
| 1 Kalpa of mortals | = | 1000 ages or yugas of gods. |
| | = | $1000 \times 12000$ years of gods. |
| | = | $12000000 \times 360 = 4320000000$ mortal years. |
| Hence one Kalpa of mortals | = | a period of four thousand three hundred and twenty millions of years of mortals measuring the duration of the world. |

अस्त्री पङ्कं पुमान्पाप्मा पापं किल्बिषकल्मषम् ।
कलुषं वृजिनैनोऽघमंहो दुरितदुष्कृतम् ॥ २३ ॥

ಅಸ್ತ್ರೀ ಪಂಕಂ ಪುಮಾನ್ ಪಾಪ್ಮಾ ಪಾಪಂ ಕಿಲ್ಬಿಷಕಲ್ಮಷಮ್ ।
ಕಲುಷಂ ವೃಜಿನೈನೋಽಘಮಂಹೋ ದುರಿತದುಷ್ಕೃತಮ್ ॥ ೨೩ ॥

स्याद्धर्ममस्त्रियां पुण्यश्रेयसी सुकृतं वृषः ।
मुत्प्रीतिः प्रमदो हर्षः प्रमोदामोदसंमदाः ॥ २४ ॥

ಸ್ಯಾದ್ಧರ್ಮಮಸ್ತ್ರಿಯಾಂ ಪುಣ್ಯಶ್ರೇಯಸೀ ಸುಕೃತಂ ವೃಷಃ ।
ಮುತ್ಪ್ರೀತಿಃ ಪ್ರಮದೋ ಹರ್ಷಃ ಪ್ರಮೋದಾಮೋದಸಂಮದಾಃ ॥ ೨೪ ॥

स्यादानन्दथुरानन्दः शर्मशातसुखानि च ।
श्वःश्रेयसं शिवं भद्रं कल्याणं मङ्गलं शुभम् ॥ २५ ॥

ಸ್ಯಾದಾನಂದಥುರಾನಂದಃ ಶರ್ಮಶಾತಸುಖಾನಿ ಚ ।
ಶ್ವಃಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಳಂ ಶುಭಮ್ ॥ ೨೫ ॥

---

೨೩. **पङ्कम्, पाप्मा, पापम्, किल्बिषम्, कल्मषम्, कलुषम् वृजिनम्, एनः, अघम्, अंहः, दुरितम्, दुष्कृतम्,** ಈ ೧೨ ಪಾಪಕ್ಕೆ ಹೆಸರು (Sin). **पङ्क** ಶಬ್ದವು ಪುಂನಪುಂಸಕವು. **पाप्मा** ಶಬ್ದವು (ನಕಾರಾಂತ) ಪುಲ್ಲಿಂಗವು. ಉಳಿದ ಶಬ್ದಗಳೆಲ್ಲವೂ ನಪುಂಸಕ ಲಿಂಗಗಳು.

೨೪-೨೬. **धर्मम्, पुण्यम्, श्रेयः, सुकृतम्, वृषः,** ಈ ೫ ಪುಣ್ಯಕ್ಕೆ ಹೆಸರು (Merit or virtue). **धर्म** ಶಬ್ದವು ಪುಂನಪುಂಸಕ ಲಿಂಗ; **वृष** ಶಬ್ದವು ಪುಲ್ಲಿಂಗ.

**मुत्, प्रीतिः, प्रमदः, हर्षः, प्रमोदः, आमोदः, संमदः, आनन्दथुः, आनन्दः, शर्म, शातम्, सुखम्** ಈ ೧೨ ಸಂತೋಷಕ್ಕೆ ಹೆಸರು (Joy or pleasure). **मुत्** ಶಬ್ದವು ದಕಾರಾಂತ ಸ್ತ್ರೀಲಿಂಗ.

**भावुकं भविकं भव्यं कुशलं क्षेममस्त्रियाम् ।**
**शस्तं चाथ त्रिषु द्रव्ये पापं पुण्यं सुखादि च ॥ २६ ॥**

ಭಾವುಕಂ ಭವುಕಂ ಭವ್ಯಂ ಕುಶಲಂ ಕ್ಷೇಮಮಸ್ತ್ರಿಯಾಮ್ ।
ಶಸ್ತಂ ಚಾಥ ತ್ರಿಷು ದ್ರವ್ಯೇ ಪಾಪಂ ಪುಣ್ಯಂ ಸುಖಾದಿ ಚ ॥ ೨೬ ॥

**मतल्लिका मचर्चिका प्रकाण्डमुद्धतल्लजौ ।**
**प्रशस्तवाचकान्यमून्ययः शुभावहो विधिः ॥ २७ ॥**

ಮತಲ್ಲಿಕಾ ಮಚರ್ಚಿಕಾ ಪ್ರಕಾಂಡಮುದ್ಧತಲ್ಲಜೌ ।
ಪ್ರಶಸ್ತವಾಚಕಾನ್ಯಮೂನ್ಯಯಃ ಶುಭಾವಹೋ ವಿಧಿಃ ॥ ೨೭ ॥

---

**श्वःश्रेयसम्, शिवम्, भद्रम्, कल्याणम्, मङ्गलम्, शुभम्, भावुकम्, भविकम्, भव्यम्, कुशलम्, क्षेमम्, शस्तम्** ಈ ೧೨ ಶುಭಕ್ಕೂ, ಕಲ್ಯಾಣಕ್ಕೂ ಹೆಸರು (Good fortune) **क्षेम** ಮತ್ತು **शस्त** ಶಬ್ದಗಳು ಪುಲ್ಲಿಂಗ ನಪುಂಸಕಲಿಂಗಗಳೆರಡರಲ್ಲಿಯೂ ಇರುತ್ತವೆ.

**पाप, पुण्य** ಶಬ್ದಗಳೆರಡೂ ಮತ್ತು **सुख** ಶಬ್ದದಿಂದ **शास्त** ಶಬ್ದದ ವರೆಗೂ ಇರುವ ೧೩ ಶಬ್ದಗಳೂ, ವಿಶೇಷ್ಯಪದಗಳ ಲಿಂಗಗಳನ್ನು ಅನುಸರಿಸುತ್ತವೆಯಾದ್ದರಿಂದ ೩ ಲಿಂಗಗಳಲ್ಲಿಯೂ ಇರುತ್ತವೆ.

೨೭. **मतल्लिका, मचर्चिका, प्रकाण्डम्, उद्धः, तल्लजः** ಈ ೫ ಪ್ರಶಸ್ತವಾಚಕಗಳು ಎಂದರೆ ಶ್ರೇಷ್ಠವೆಂದು ತಿಳಿಸುವ ಶಬ್ದಗಳು (Anything excellent of its kind). ಈ ಶಬ್ದಗಳು ತಮ್ಮ ತಮ್ಮ ನಿಯತ ಲಿಂಗಗಳನ್ನು ಬಿಟ್ಟು ಬೇರೆ ಲಿಂಗಗಳಲ್ಲಿರುವುದಿಲ್ಲ. ಸಮಾಸದಲ್ಲಿ ಉತ್ತರಪದಗಳಾಗಿರುತ್ತವೆ. **प्रकाण्ड** ಶಬ್ದವು ಮಾತ್ರ ಪುಲ್ಲಿಂಗದಲ್ಲಿಯೂ ಸಹ ರೂಢಿಯಾಗಿದೆ (**पण्डितप्रकाण्डः**). ಉಳಿದ ಉದಾಹರಣೆಗಳು:— **पुरुषमतल्लिका, गोमतल्लिका, गोमचर्चिका, गोप्रकाण्डम्, मनुष्योद्धः, कुमारीतल्लजः ।**

**दैवं दिष्टं भागधेयं भाग्यं स्त्री नियतिर्विधिः ।**
**हेतुर्ना कारणं बीजं निदानं त्वादिकारणम् ॥ २८ ॥**

ದೈವಂ ದಿಷ್ಟಂ ಭಾಗಧೇಯಂ ಭಾಗ್ಯಂ ಸ್ತ್ರೀ ನಿಯತಿರ್ವಿಧಿಃ ।
ಹೇತುರ್ನಾ ಕಾರಣಂ ಬೀಜಂ ನಿದಾನಂ ತ್ವಾದಿಕಾರಣಮ್ ॥ ೨೮ ॥

**क्षेत्रज्ञ आत्मा पुरुषः प्रधानं प्रकृतिः स्त्रियाम् ।**
**विशेषः कालिकोऽवस्था गुणाः सत्त्वं रजस्तमः ॥२९॥**

ಕ್ಷೇತ್ರಜ್ಞ ಆತ್ಮಾ ಪುರುಷಃ ಪ್ರಧಾನಂ ಪ್ರಕೃತಿಃ ಸ್ತ್ರಿಯಾಮ್ ।
ವಿಶೇಷಃ ಕಾಲಿಕೋಽವಸ್ಥಾ ಗುಣಾಃ ಸತ್ತ್ವಂ ರಜಸ್ತಮಃ ॥ ೨೯ ॥

---

ಶುಭವನ್ನುಂಟುಮಾಡುವ ವಿಧಿ ಅಥವಾ ದೈವಕ್ಕೆ (Good luck or fortune) **अयः** ಎಂದು ಹೆಸರು. ಈ ಶಬ್ದವು ಅಕಾರಾಂತ ಪುಲ್ಲಿಂಗವು.

೨೮. **दैवम्, दिष्टम्, भागधेयम्, भाग्यम्, नियतिः, विधिः** ಈ ೬ ಅದೃಷ್ಟದ ಹೆಸರು (Destiny, Luck). ಇವುಗಳಲ್ಲಿ **नियति** ಶಬ್ದವು ಸ್ತ್ರೀಲಿಂಗ, **विधि** ಶಬ್ದವು ಪುಲ್ಲಿಂಗ.

**हेतुः, कारणम्, बीजम्** ಈ ೩ ಕಾರಣಕ್ಕೆ ಹೆಸರು (Cause). **हेतु** ಶಬ್ದವು ಪುಲ್ಲಿಂಗ. ಮುಖ್ಯ ಅಥವಾ ಮೂಲವಾದ ಕಾರಣಕ್ಕೆ (Primary Cause) **निदानम्, आदिकारणम्** ಎಂದು ೨ ಹೆಸರುಗಳು.

೨೯. **क्षेत्रज्ञः, आत्मा, पुरुषः** ಈ ೩ ಜೀವ ಅಥವಾ ಆತ್ಮಕ್ಕೆ ಹೆಸರು (The Soul). **प्रधानम्, प्रकृतिः** ಈ ೨ ಮೂಲ ಪ್ರಕೃತಿಗೆ ಹೆಸರು (Primary or unevolved matter or nature).

ಕಾಲವಶದಿಂದ ಉಂಟಾಗುವ ವಿಶೇಷಕ್ಕೆ (State or condition) **अवस्था** ಎಂದೂ, ಪ್ರಕೃತಿಯ ಧರ್ಮವಾದ ಸತ್ತ್ವರಜಸ್ತಮೋಗುಣಗಳಿಗೆ (Qualities of nature or natural disposition)

जनुर्जननजन्मानि जनिरुत्पत्तिरुद्भवः ।
प्राणी तु चेतनो जन्मी जन्तुजन्युशरीरिणः ॥ ३० ॥

ಜನುರ್ಜನನಜನ್ಮಾನಿ ಜನಿರುತ್ಪತ್ತಿರುದ್ಭವಃ ।
ಪ್ರಾಣೀ ತು ಚೇತನೋ ಜನ್ಮೀ ಜಂತುಜನ್ಯುಶರೀರಿಣಃ ॥ ೩೦ ॥

जातिर्जातं च सामान्यं व्यक्तिस्तु पृथगात्मता ।
चित्तं तु चेतो हृदयं स्वान्तं हृन्मानसं मनः ॥ ३१ ॥

॥ इति कालवर्गः ॥

ಜಾತಿರ್ಜಾತಂ ಚ ಸಾಮಾನ್ಯಂ ವ್ಯಕ್ತಿಸ್ತು ಪೃಥಗಾತ್ಮತಾ ।
ಚಿತ್ತಂ ತು ಚೇತೋ ಹೃದಯಂ ಸ್ವಾಂತಂ ಹೃನ್ಮಾನಸಂ ಮನಃ ॥ ೩೧ ॥

॥ ಇತಿ ಕಾಲವರ್ಗಃ ॥

---

**गुणाः** ಎಂದೂ ಹೆಸರು. **सत्त्व** ಶಬ್ದವು ಅಕಾರಾಂತ ನಪುಂಸಕಲಿಂಗ, **रजः, तमः** ಎಂಬ ಶಬ್ದಗಳು ಸಕಾರಾಂತ ನಪುಂಸಕಲಿಂಗವು.

೩೦. **जनुः, जननम्, जन्म, जनिः, उत्पत्तिः, उद्भवः** ಈ ೬ ಹುಟ್ಟುವಿಕೆಗೆ ಹೆಸರು (Birth).

**प्राणी, चेतनः, जन्मी, जन्तुः, जन्युः, शरीरी** ಈ ೬ ಪ್ರಾಣವುಳ್ಳ ವಸ್ತು ಅಥವಾ ಪ್ರಾಣಿಗೆ ಹೆಸರು (A living being).

೩೧. **जातिः, जातम्, सामान्यम्** ಈ ೩ ಶಬ್ದಗಳು ಜಾತಿಗೆ ಹೆಸರು (Kind, genus). **व्यक्तिः** ಎಂದರೆ ಪ್ರತ್ಯೇಕವಾಗಿ ಒಂದೊಂದು ಎಂದು ಭಾವಿಸಲ್ಪಡತಕ್ಕ ವಸ್ತು ಅಥವಾ ವ್ಯಕ್ತಿ (Individual or Individuality).

**चित्तम्, चेतः, हृदयम्, स्वान्तम्, हृत्, मानसम्, मनः** ಈ ೭ ಮನಸ್ಸಿಗೆ ಹೆಸರು (Mind, in its widest sense applied to all the mental powers).

## ॥ अथ धीवर्गः ॥

बुद्धिर्मनीषा धिषणा धीः प्रज्ञा शेमुषी मतिः ।
प्रेक्षोपलब्धिश्चित्संवित्प्रतिपज्ज्ञप्तिचेतनाः ॥ १ ॥

॥ ಅಥ ಧೀವರ್ಗಃ ॥

ಬುದ್ಧಿರ್ಮನೀಷಾ ಧಿಷಣಾ ಧೀಃ ಪ್ರಜ್ಞಾ ಶೇಮುಷೀ ಮತಿಃ ।
ಪ್ರೇಕ್ಷೋಪಲಬ್ಧಿಶ್ಚಿತ್ಸಂವಿತ್ಪ್ರತಿಪಜ್ಜ್ಞಪ್ತಿಚೇತನಾಃ ॥ ೧ ॥

धीर्धारणावती मेधा संकल्पः कर्म मानसम् ।
(अवधानं समाधानं प्रणिधानं तथैव च ।)
चित्ताभोगो मनस्कारश्चर्चा संख्या विचारणा ॥ २ ॥

ಧೀರ್ಧಾರಣಾವತೀ ಮೇಧಾ ಸಂಕಲ್ಪಃ ಕರ್ಮ ಮಾನಸಮ್ ।
(ಅವಧಾನಂ ಸಮಾಧಾನಂ ಪ್ರಣಿಧಾನಂ ತಥೈವ ಚ ।)
ಚಿತ್ತಾಭೋಗೋ ಮನಸ್ಕಾರಶ್ಚರ್ಚಾ ಸಂಖ್ಯಾ ವಿಚಾರಣಾ ॥ ೨ ॥

---

೧. **बुद्धिः, मनीषा, धिषणा, धीः, प्रज्ञा, शेमुषी, मतिः, प्रेक्षा, उपलब्धिः, चित्, संवित्, प्रतिपत्, ज्ञप्तिः, चेतना** ಈ ೧೪ ಬುದ್ಧಿಯ ಹೆಸರುಗಳು (Intellect or understanding). ಎಲ್ಲವೂ ಸ್ತ್ರೀಲಿಂಗ ಶಬ್ದಗಳು. **चित्** ಶಬ್ದವು ತಕಾರಾಂತವು. **संवत्** ಮತ್ತು **प्रतिपत्** ಶಬ್ದಗಳು ದಕಾರಾಂತಗಳು.

೨. ಜ್ಞಾಪಕಶಕ್ತಿಯುಳ್ಳ ಬುದ್ಧಿಗೆ (Intellect with retentive power) **मेधा** ಎಂದೂ, ಮಾನಸಿಕವಾದ ವ್ಯಾಪಾರ ಅಥವಾ ಮನಸ್ಸಿನಲ್ಲಿ ಮಾಡಿಕೊಳ್ಳುವ ಒಂದು ಭಾವನೆಗೆ (A conception, a thought or a notion) **संकल्पः** ಎಂದೂ ಹೆಸರು.

**अवधानम्, समाधानम्, प्रणिधानम्** ಈ ೩ ಮನಸ್ಸಿನ ಸಮಾಧಾನಕ್ಕೆ ಹೆಸರು (Satisfaction).

(विमर्शो भावना चैव वासना च निगद्यते।)
अध्याहारस्तर्क ऊहो विचिकित्सा तु संशयः।
संदेहद्वापरौ चाथ समौ निर्णयनिश्चयौ ॥ ३ ॥

(ವಿಮರ್ಶೋ ಭಾವನಾ ಚೈವ ವಾಸನಾ ಚ ನಿಗದ್ಯತೇ ।)
ಅಧ್ಯಾಹಾರಸ್ತರ್ಕ ಊಹೋ ವಿಚಿಕಿತ್ಸಾ ತು ಸಂಶಯಃ ।
ಸಂದೇಹದ್ವಾಪರೌ ಚಾಥ ಸಮೌ ನಿರ್ಣಯನಿಶ್ಚಯೌ ॥ ೩ ॥

मिथ्यादृष्टिर्नास्तिकता व्यापादो द्रोहचिन्तनम्।
समौ सिद्धान्तराद्धान्तौ भ्रान्तिर्मिथ्यामतिर्भ्रमः ॥ ४ ॥

ಮಿಥ್ಯಾದೃಷ್ಟಿರ್ನಾಸ್ತಿಕತಾ ವ್ಯಾಪಾದೋ ದ್ರೋಹಚಿಂತನಮ್ ।
ಸಮೌ ಸಿದ್ಧಾಂತರಾದ್ಧಾಂತೌ ಭ್ರಾಂತಿರ್ಮಿಥ್ಯಾಮತಿರ್ಭ್ರಮಃ ॥ ೪ ॥

---

**चित्ताभोगः, मनस्कारः** ೨, ಸುಖದುಃಖಾದಿಗಳನ್ನು ಮನಸ್ಸಿನಲ್ಲಿ ಅರಿಯುವಿಕೆ (Awareness of pleasure or pain). **चर्चा, संख्या, विचारणा** ೩, ಪ್ರಮಾಣಗಳಿಂದ ಪರೀಕ್ಷಿಸುವಿಕೆ, ವಿಚಾರ ಮಾಡುವಿಕೆ (Reasoning or reflection).

**विमर्शः, भावना, वासना** ೩, ಹಿಂದೆ ಅನುಭವಿಸಿದುದರ ಸ್ಮರಣೆ ಅಥವಾ ಸಂಸ್ಕಾರ (Impressions of past perceptions).

೩. **अध्याहारः, तर्कः, ऊहः** ೩, ಊಹೆ; ಬಿಟ್ಟುಹೋಗಿರುವುದನ್ನು ಸೇರಿಸಿಕೊಂಡು ಅರ್ಥ ಪೂರ್ತಿಮಾಡಿಕೊಳ್ಳುವಿಕೆ (Inference). **विचिकित्सा, संशयः, संदेहः, द्वापरः** ೪, ಸಂಶಯ (Doubt). **निर्णयः, निश्चयः** ೨, ನಿಶ್ಚಯ (Decision).

೪. **मिथ्यादृष्टिः, नास्तिकता** ೨, ಪರಲೋಕ ಮುಂತಾದ್ದು ಇಲ್ಲವೆಂಬ ಬುದ್ಧಿ (Heresy, atheism or false doctrine). **व्यापादः, द्रोहचिन्तनम्** ೨, ದ್ರೋಹ ಮಾಡಬೇಕೆಂಬ ಬುದ್ಧಿ

(समौ संकेतसमयौ प्रतिपत्तिर्विहस्तथा ।)
संविदागूः प्रतिज्ञानं नियमाश्रवसंश्रवाः ।
अङ्गीकाराभ्युपगमप्रतिश्रवसमाधयः ॥ ५ ॥

(ಸಮೌ ಸಂಕೇತಸಮಯೌ ಪ್ರತಿಪತ್ತಿರ್ವಿಹಸ್ತಥಾ ।)
ಸಂವಿದಾಗೂಃ ಪ್ರತಿಜ್ಞಾನಂ ನಿಯಮಾಶ್ರವಸಂಶ್ರವಾಃ ।
ಅಂಗೀಕಾರಾಭ್ಯುಪಗಮಪ್ರತಿಶ್ರವಸಮಾಧಯಃ ॥ ೫ ॥

मोक्षे धीर्ज्ञानमन्यत्र विज्ञानं शिल्पशास्त्रयोः ।
मुक्तिः कैवल्यनिर्वाणश्रेयोनिःश्रेयसामृतम् ॥ ६ ॥

ಮೋಕ್ಷೇ ಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ ।
ಮುಕ್ತಿಃ ಕೈವಲ್ಯನಿರ್ವಾಣಶ್ರೇಯೋನಿಶ್ರೇಯಸಾಮೃತಮ್ ॥ ೬ ॥

---

(Malice). **सिद्धान्तः, राद्धान्तः** ೨, ಸಾಧಿಸಲ್ಪಟ್ಟ ವಿಷಯ (Conclusion). **भ्रान्तिः, मिथ्यामतिः, भ्रमः** ೩, ಒಂದನ್ನು ಅದಲ್ಲದೆ ಬೇರೆ ಮತ್ತೊಂದಾಗಿ ತಿಳಿಯುವುದು (Misapprehension or mistake).

**संकेतः, समयः, प्रतिपत्तिः, विहः** ೪, ಸಂಕೇತ (Convention). ಈ ಪಙ್ಕ್ತಿಯು ಹೆಚ್ಚಿಗೆಯ ಪಾಠಕ್ಕೆ ಸೇರಿದುದು.

೫. **संवित्, आगूः, प्रतिज्ञानम्, नियमः, आश्रवः, संश्रवः, अङ्गीकारः, अभ्युपगमः, प्रतिश्रवः, समाधिः** ೧೦, ಅಂಗೀಕಾರ, ಒಪ್ಪುವಿಕೆ (Agreement, approval or assent). **संवित्** ಮತ್ತು **आगू** ಶಬ್ದಗಳು ಸ್ತ್ರೀಲಿಂಗಗಳು. **आगू** ಶಬ್ದವು **वधू** ಶಬ್ದದಂತೆ, **आगूः आग्वौ आग्वः** ಎಂದು ಹೇಳಬೇಕು; ದ್ವಿತೀಯಾ ವಿಭಕ್ತಿಯಲ್ಲಿ ಮಾತ್ರ **आग्वम् आग्वौ आग्वः** ಎಂದು ವಿಶೇಷವು. **आगूः आगुरौ आगुरः** ಎಂದು **धूर्** ಶಬ್ದದಂತೆಯೂ ಆಗುವುದು.

೬-೭. ಮೋಕ್ಷ ಸಾಧಕವಾದ ಪಾರಮಾರ್ಥಿಕ ಜ್ಞಾನಕ್ಕೆ (true knowledge leading to final emancipation) **ज्ञानम्**

**मोक्षोऽपवर्गोऽथाज्ञानमविद्याहंमतिः स्त्रियाम् ।**
**रूपं शब्दो गन्धरसस्पर्शाश्च विषया अमी ॥ ७ ॥**

ಮೋಕ್ಷೋಽಪವರ್ಗೋಽಥಾಜ್ಞಾನಮವಿದ್ಯಾಹಂಮತಿಃ ಸ್ತ್ರಿಯಾಮ್ ।
ರೂಪಂ ಶಬ್ದೋ ಗಂಧರಸಸ್ಪರ್ಶಾಶ್ಚ ವಿಷಯಾ ಅಮೀ ॥ ೭ ॥

**गोचरा इन्द्रियार्थाश्च हृषीकं विषयीन्द्रियम् ।**
**कर्मेन्द्रियं तु पाय्वादि मनोनेत्रादि धीन्द्रियम् ॥ ८ ॥**

ಗೋಚರಾ ಇಂದ್ರಿಯಾರ್ಥಾಶ್ಚ ಹೃಷೀಕಂ ವಿಷಯೀಂದ್ರಿಯಮ್ ।
ಕರ್ಮೇಂದ್ರಿಯಂ ತು ಪಾಯ್ವಾದಿ ಮನೋನೇತ್ರಾದಿ ಧೀಂದ್ರಿಯಮ್ ॥ ೮ ॥

---

ಎಂದೂ, ಲೌಕಿಕವಾದ ಶಾಸ್ತ್ರಜ್ಞಾನಕ್ಕೆ (Worldly knowledge; knowledge of Arts and Sciences) **विज्ञानम्** ಎಂದೂ ಹೆಸರು.

**मुक्तिः, कैवल्यम्, निर्वाणम्, श्रेयः, निश्रेयसम्, अमृतम्, मोक्षः, अपवर्गः** ಈ ೮ ಮೋಕ್ಷ ಅಥವಾ ಶಾಶ್ವತ ಸುಖಕ್ಕೆ ಹೆಸರು. (Final Beatitude).

**अज्ञानम्, अविद्या, अहंमतिः** ೩, ಅಜ್ಞಾನ; ಅನಿತ್ಯವಾದುದನ್ನು ನಿತ್ಯವೆಂದೂ, ಆತ್ಮವಲ್ಲದುದನ್ನು ಆತ್ಮವೆಂದೂ ತಿಳಿಯುವಂತಹ ಭ್ರಾಂತಿ (Spiritual ignorance).

೭-೮. ರೂಪ, ಶಬ್ದ, ಗಂಧ, ರಸ, ಸ್ಪರ್ಶ, ಇವುಗಳು ಕ್ರಮವಾಗಿ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಈ ಇಂದ್ರಿಯಗಳಿಗೆ ಗೋಚರವಾಗುವುವಾದ್ದರಿಂದ, **रूपम्, शब्दः, गन्धः, रसः स्पर्शः** ಎಂಬ ಈ ಐದಕ್ಕೂ ಒಟ್ಟಿಗೆ **विषयाः, गोचराः, इन्द्रियार्थाः,** ಎಂದು ೩ ಹೆಸರುಗಳು (Objects of sense).

**हृषीकम्, विषयि, इन्द्रियम्,** ಈ ೩ ಇಂದ್ರಿಯಸಾಮಾನ್ಯಕ್ಕೆ ಹೆಸರು; ಕಣ್ಣು, ಕಿವಿ ಮುಂತಾದವು (A sense-organ). **विषयि**

**तुवरस्तु कषायोऽस्त्री मधुरो लवणः कटुः ।**
**तिक्तोऽम्लश्च रसाः पुंसि तद्वत्सु षडमी त्रिषु ॥ ९ ॥**

ತುವರಸ್ತು ಕಷಾಯೋಽಸ್ತ್ರೀ ಮಧುರೋ ಲವಣಃ ಕಟುಃ ।
ತಿಕ್ತೋಽಮ್ಲಶ್ಚ ರಸಾಃ ಪುಂಸಿ ತದ್ವತ್ಸು ಷಡಮೀ ತ್ರಿಷು ॥ ೯ ॥

**विमर्दोत्थे परिमलो गन्धे जनमनोहरे ।**
**आमोदः सोऽतिनिर्हारी वाच्यलिङ्गत्वमागुणात् ॥ १० ॥**

ವಿಮರ್ದೋತ್ಥೇ ಪರಿಮಲೋ ಗಂಧೇ ಜನಮನೋಹರೇ ।
ಆಮೋದಃ ಸೋಽತಿನಿರ್ಹಾರೀ ವಾಚ್ಯಲಿಂಗತ್ವಮಾಗುಣಾತ್ ॥ ೧೦ ॥

---

ಎಂಬುದು ನಾಸ್ತ್ರವಾದ **विषयिन्** ಶಬ್ದವು ; ಈ ಮೂರು ಪದಗಳೂ ನಪುಂಸಕ ಲಿಂಗಗಳು.

**कर्मेन्द्रियम्** ಎಂದರೆ ಕೆಲಸದ ಇಂದ್ರಿಯಗಳಿಗೆ ಹೆಸರು. ವಾಕ್, ಪಾಣಿ, ಪಾದ, ಪಾಯೂಪಸ್ಥಗಳೆಂದು ೫ (The five organs of action, viz., larynx, hand, foot, anus and parts of generation). **धीन्द्रियम्** ಎಂದರೆ ಬುದ್ಧಿಯ ಅಥವಾ ಜ್ಞಾನದ ಇಂದ್ರಿಯಗಳಿಗೆ ಹೆಸರು. ಮನಸ್ಸನ್ನೂ ಸೇರಿಸಿಕೊಂಡು ಈ ಬುದ್ಧೀಂದ್ರಿಯಗಳು ೬ ಆಗುತ್ತವೆ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಈ ೫ ಮತ್ತು ಮನಸ್ಸು ಸೇರಿ ೬ (The five organs of perception together with manas or mind considered as the sixth organ).

೯. **तुवरः, कषायः** ೨, ಒಗರು (Astringent); **मधुरः** ೧, ಸಿಹಿ (Sweet); **लवणः** ೧, ಉಪ್ಪು (Salt); **तिक्तः** ೧, ಕಹಿ (Bitter); **अम्लः** ೧, ಹುಳಿ (Sour) ಈ ೬ ಪದಗಳು ಗುಣವಾಚಕವಾದರೆ ಪುಲ್ಲಿಂಗವು, ದ್ರವ್ಯವಾಚಕವಾದರೆ ೩ ಲಿಂಗಗಳೂ ಆಗುತ್ತವೆ.

೧೦. ಅನೇಕ ಪದಾರ್ಥಗಳನ್ನು ಕುಟ್ಟಿ ಪುಡಿಮಾಡುವುದರಿಂದ ಉಂಟಾಗುವ ಮನೋಹರವಾದ ಸುಗಂಧಕ್ಕೆ (A pleasing scent)

समाकर्षी तु निर्हारी सुरभिर्घ्राणतर्पणः ।
इष्टगन्धः सुगन्धिः स्यादामोदी मुखवासनः ॥ ११ ॥

ಸಮಾಕರ್ಷೀ ತು ನಿರ್ಹಾರೀ ಸುರಭಿರ್ಘ್ರಾಣತರ್ಪಣಃ ।
ಇಷ್ಟಗಂಧಃ ಸುಗಂಧಿಃ ಸ್ಯಾದಾಮೋದೀ ಮುಖವಾಸನಃ ॥ ೧೧ ॥

पूतिगन्धिस्तु दुर्गन्धो विस्रं स्यादामगन्धि यत् ।
शुक्लशुभ्रशुचिश्वेतविशदश्येतपाण्डराः ॥ १२ ॥

ಪೂತಿಗಂಧಿಸ್ತು ದುರ್ಗಂಧೋ ವಿಸ್ರಂ ಸ್ಯಾದಾಮಗಂಧಿ ಯತ್ ।
ಶುಕ್ಲ ಶುಭ್ರ ಶುಚಿಶ್ವೇತವಿಶದಶ್ಯೇತಪಾಂಡರಾಃ ॥ ೧೨ ॥

---

**परिमलः** ಎಂದೂ, ಬಹುದೂರ ವ್ಯಾಪಿಸುವ ಸುವಾಸನೆಗೆ (A diffusive fragrance or perfume) **आमोदः** ಎಂದೂ ಹೆಸರು.

ಇಲ್ಲಿಂದ ಮುಂದಕ್ಕೆ "**गुणे शुक्लादयः पुंसि**" ಎಂಬ ಈ ವರ್ಗದ ಕಡೆಯ ಪಂಙ್ಕ್ತಿಯವರೆಗೆ ಬರುವ ಗುಣಗಳ ಹೆಸರನ್ನು ತಿಳಿಸುವ ಶಬ್ದಗಳೆಲ್ಲವೂ ವಾಚ್ಯಲಿಂಗಗಳು, ಎಂದರೆ ವಿಶೇಷ್ಯಾಧೀನವಾಗಿ ೩ ಲಿಂಗಗಳನ್ನೂ ಹೊಂದುತ್ತವೆ ಎಂದು ತಿಳಿಯಬೇಕು.

೧೧. **समाकर्षी, निर्हारी** ಈ ೨ ದೂರ ವ್ಯಾಪಿಸುವ ಸುವಾಸನೆ ದ್ರವ್ಯಕ್ಕೆ ಹೆಸರು (A diffussively fragrant substance). **सुरभिः, घ्राणतर्पणः, इष्टगन्धः, सुगन्धिः** ಈ ೪ ಸುಗಂಧ ದ್ರವ್ಯಕ್ಕೆ ಹೆಸರು (Sweet-smelling substance). **आमोदी, मुखवासनः** ಈ ೨ ಬಾಯಿಗೆ ಸುವಾಸನೆಯನ್ನುಂಟುಮಾಡುವ ಕರ್ಪೂರ, ತಾಂಬೂಲ ಮುಂತಾದ್ದಕ್ಕೆ ಹೆಸರು (A perfume for the mouth in the form of scented pills; "Pan-supari").

೧೨-೧೩. **पूतिगन्धः, दुर्गन्धः** ಈ ೨ ಕೆಟ್ಟವಾಸನೆಯುಳ್ಳದಕ್ಕೆ ಹೆಸರು (Foul-smelling or stinking). ಹಸಿ ಅಥವಾ ಅಪಕ್ವ ಮಾಂಸದ ವಾಸನೆಯಂತೆ ಕೆಟ್ಟವಾಸನೆಯುಳ್ಳದಕ್ಕೆ (Smelling like

अवदातः सितो गौरो वलक्षो धवलोऽर्जुनः ।
हरिणः पाण्डुरः पाण्डुरीषत्पाण्डुस्तु धूसरः ॥ १३ ॥

ಅವದಾತಃ ಸಿತೋ ಗೌರೋ ವಲಕ್ಷೋ ಧವಲೋಽರ್ಜುನಃ ।
ಹರಿಣಃ ಪಾಂಡುರಃ ಪಾಂಡುರೀಷತ್ಪಾಂಡುಸ್ತು ಧೂಸರಃ ॥ ೧೩ ॥

कृष्णे नीलासितश्यामकालश्यामलमेचकाः ।
पीतो गौरो हरिद्राभः पालाशो हरितो हरित् ॥ १४ ॥

ಕೃಷ್ಣೇ ನೀಲಾಽಸಿತಶ್ಯಾಮಕಾಲಶ್ಯಾಮಲಮೇಚಕಾಃ ।
ಪೀತೋ ಗೌರೋ ಹರಿದ್ರಾಭಃ ಪಾಲಾಶೋ ಹರಿತೋ ಹರಿತ್ ॥ ೧೪ ॥

लोहितो रोहितो रक्तः शोणः कोकनदच्छविः ।
अव्यक्तरागस्त्वरुणः श्वेतरक्तस्तु पाटलः ॥ १५ ॥

ಲೋಹಿತೋ ರೋಹಿತೋ ರಕ್ತಃ ಶೋಣಃ ಕೋಕನದಚ್ಛವಿಃ ।
ಅವ್ಯಕ್ತರಾಗಸ್ತ್ವರುಣಃ ಶ್ವೇತರಕ್ತಸ್ತು ಪಾಟಲಃ ॥ ೧೫ ॥

---

raw meat or smelling musty) **विस्रम्** ಎಂದು ಹೆಸರು.

**शुक्लः**, **शुभ्रः**, **शुचिः**, **श्वेतः**, **विशदः**, **श्येतः**, **पाण्डरः**, **अवदातः**, **सितः**, **गौरः**, **वलक्षः**, **धवलः**, **अर्जुनः** ಈ ೧೩ ಬಿಳಿಯ ಬಣ್ಣಕ್ಕೆ ಹೆಸರು (White).

**हरिणः**, **पाण्डुरः**, **पाण्डुः** ಈ ೩ ಹಳದಿ ಮಿಶ್ರವಾದ ಬಿಳುಪಿಗೆ ಹೆಸರು (Yellowish white). ಈ ಬಣ್ಣವೇ ಎಳೆಬಿಳುಪಾಗಿ ಧೂಳಿನ ಅಥವಾ ಕಂದು ಬಣ್ಣಕ್ಕಿದ್ದರೆ (Dust-coloured or grey) **धूसरः** ಎಂದು ಹೆಸರು.

೧೪. **कृष्णः**, **नीलः**, **असितः**, **श्यामः**, **कालः**, **श्यामलः**, **मेचकः** ಈ ೭ ಕರಿಯ ಬಣ್ಣಕ್ಕೆ ಹೆಸರು (Black or dark-blue).

**पीतः**, **गौरः**, **हरिद्राभः** ಈ ೩ ಹಳದಿಯ ಬಣ್ಣಕ್ಕೆ ಹೆಸರು (Yellow). **पालाशः**, **हरितः**, **हरित्** ಈ ೩ ಎಲೆಹಸುರು ಬಣ್ಣಕ್ಕೆ ಹೆಸರು (Green).

**श्यावः स्यात्कपिशो धूम्रधूमलौ कृष्णलोहिते ।**
**कडारः कपिलः पिङ्गपिशङ्गौ कद्रुपिङ्गलौ ॥ १६ ॥**

ಶ್ಯಾವಃ ಸ್ಯಾತ್ಕಪಿಶೋ ಧೂಮ್ರಧೂಮಲೌ ಕೃಷ್ಣಲೋಹಿತೇ ।
ಕಡಾರಃ ಕಪಿಲಃ ಪಿಂಗಪಿಶಂಗೌ ಕದ್ರುಪಿಂಗಲೌ ॥ ೧೬ ॥

**चित्रं किर्मीरकल्माषशबलैताश्च कर्बुरे ।**
**गुणे शुक्लादयः पुंसि गुणिलिङ्गास्तु तद्वति ॥ १७ ॥**

**॥ इति धीवर्गः ॥**

ಚಿತ್ರಂ ಕಿರ್ಮೀರಕಲ್ಮಾಷಶಬಲೈತಾಶ್ಚ ಕರ್ಬುರೇ ।
ಗುಣೇ ಶುಕ್ಲಾದಯಃ ಪುಂಸಿ ಗುಣಿಲಿಂಗಾಸ್ತು ತದ್ವತಿ ॥ ೧೭ ॥

॥ ಇತಿ ಧೀವರ್ಗಃ ॥

---

೧೫. **लोहितः, रोहितः, रक्तः** ಈ ೩ ಕೆಂಪು ಬಣ್ಣಕ್ಕೆ ಹೆಸರು (Crimson). ಕೆಂದಾವರೆ ಬಣ್ಣಕ್ಕೆ (Dark red) **शोणः** ಎಂದೂ, ಎಳೆಗೆಂಪು ಬಣ್ಣಕ್ಕೆ (Pink) **अरुणः** ಎಂದೂ, ಕೆಂಪು ಬಿಳುಪು ಬೆರತಿರುವ ಬಣ್ಣಕ್ಕೆ (Pale red) **पाटलः** ಎಂದೂ ಹೆಸರು.

೧೬. **श्यावः, कपिशः** ಈ ೨ ಪಚ್ಚೆ ಬೆರತ ಕೆಂಪು ಬಣ್ಣಕ್ಕೆ ಅಥವಾ ಕೋತಿಯ ಬಣ್ಣಕ್ಕೆ ಹೆಸರು ('Ape-coloured', reddish brown or dark brown). **धूम्रः, धूमलः, कृष्णलोहितः** ಈ ೩ ಕಪ್ಪು ಮಿಶ್ರವಾದ ಕೆಂಪು ಬಣ್ಣಕ್ಕೆ ಹೆಸರು (Smoke-coloured, purple). **कडारः, कपिलः, पिङ्गः, पिशङ्गः, कद्रुः, पिङ्गलः** ಈ ೬ ಬಿಳುಪು ಹಳದಿ ಮಿಶ್ರವಾದ ಕೆಂಪು ಬಣ್ಣಕ್ಕೆ ಹೆಸರು (Tawny colour).

೧೭. **चित्रम्, किर्मीरः, कल्माषः, शबलः, एतः, कर्बुरः** ಈ ೬ ನಾನಾವಿಧವಾದ ಬಣ್ಣಗಳಿಂದ ಕೂಡಿದ ಚಿತ್ರವರ್ಣಕ್ಕೆ ಹೆಸರು (Variegated colour).

# ॥ अथ शब्दादिवर्गः ॥

**ब्राह्मी तु भारती भाषा गीर्वाग्वाणी सरस्वती ।**
**व्याहार उक्तिर्लपितं भाषितं वचनं वचः ॥ १ ॥**

|| ಅಥ ಶಬ್ದಾದಿವರ್ಗಃ ||

ಬ್ರಾಹ್ಮೀ ತು ಭಾರತೀ ಭಾಷಾ ಗೀರ್ವಾಗ್ವಾಣೀ ಸರಸ್ವತೀ |
ವ್ಯಾಹಾರ ಉಕ್ತಿರ್ಲಪಿತಂ ಭಾಷಿತಂ ವಚನಂ ವಚಃ || ೧ ||

**अपभ्रंशोऽपशब्दः स्याच्छास्त्रे शब्दस्तु वाचकः ।**
**तिङ्सुबन्तचयो वाक्यं क्रिया वा कारकान्विता ॥ २ ॥**

ಅಪಭ್ರಂಶೋಽಪಶಬ್ದಃ ಸ್ಯಾಚ್ಛಾಸ್ತ್ರೇ ಶಬ್ದಸ್ತು ವಾಚಕಃ |
ತಿಙ್ಸುಬಂತಚಯೋ ವಾಕ್ಯಂ ಕ್ರಿಯಾ ವಾ ಕಾರಕಾನ್ವಿತಾ || ೨ ||

---

ಹಿಂದೆ ೧೨ನೆಯ ಶ್ಲೋಕದಲ್ಲಿ ಹೇಳಿರುವ **शुक्लः, शुभ्रः, शुचिः, श्वेतः** ಮೊದಲಾದ ಶಬ್ದಗಳಿಂದ ಮೊದಲುಗೊಂಡು ೧೭ನೆಯ ಶ್ಲೋಕದಲ್ಲಿ ಬರುವ **कर्बुर** ಶಬ್ದ ಪೂರ್ತಿಯಾಗಿ ಇರುವ ಶಬ್ದಗಳೆಲ್ಲವೂ ಗುಣವನ್ನು ಮಾತ್ರ ತಿಳಿಸುವಾಗ '**पटस्य शुक्लः**' ಎಂಬಲ್ಲಿರುವಂತೆ ಪುಲ್ಲಿಂಗವೂ, ಗುಣವುಳ್ಳ ದ್ರವ್ಯಗಳನ್ನು ತಿಳಿಸುವಾಗ ವಿಶೇಷ್ಯವಾದ ದ್ರವ್ಯಪದವು ಯಾವ ಲಿಂಗವೋ ಆ ಲಿಂಗವನ್ನೇ ಹೊಂದಿರುತ್ತವೆ ಎಂದೂ ತಿಳಿಯಬೇಕು.

ಹೇಗೆಂದರೆ— **शुक्लं अम्बरम्, शुक्लः पक्षः, शुक्ला धेनुः । शुभ्रं वस्त्रम्, शुभ्रः पटः, शुभ्रा शाटी ।**

೧. **ब्राह्मी, भारती, भाषा, गीः, वाक्, वाणी, सरस्वती, व्याहारः, उक्तिः, लपितम्, भाषितम्, वचनम्, वचः** ಈ ೧೩, ಭಾಷೆ ಅಥವಾ ಮಾತಿಗೆ ಹೆಸರು (Speech or language). **ब्राह्मी** ಶಬ್ದದಿಂದ **सरस्वती** ಶಬ್ದದವರೆಗೂ ಪೂರ್ತಿಯಾಗಿರುವ ೭ ಪದಗಳು ಮಾತಿನ ಅಧಿದೇವತೆಯಾದ ಸರಸ್ವತಿಯ ಹೆಸರುಗಳೂ ಆಗುತ್ತವೆ

(The first seven words in the list are also names of the Goddess of speech).

೨. **अपभ्रंशः, अपशब्दः** ಈ ೨ ವ್ಯಾಕರಣಬದ್ಧವಲ್ಲದ ಭಾಷೆ ಅಥವಾ ಅಪಶಬ್ದಕ್ಕೆ ಹೆಸರು (Ungrammatical language). ವ್ಯಾಕರಣ ಮುಂತಾದ ಶಾಸ್ತ್ರಕ್ಕೆ ಸಮ್ಮತವಾದ ಮಾತಿಗೆ **शब्दः** ಎಂದು ಹೆಸರು (A word).

**वाक्यम्** (A sentence) ಎಂದರೆ ಪೂರ್ಣವಾಗಿ ಅರ್ಥಬೋಧವಾಗುವಂತೆ ಕೂಡಿರುವ [1] **तिङन्त** (ಕ್ರಿಯಾಪದಗಳ) **चयः** (ಸಮೂಹ), [2] **सुबन्तचयः** (ನಾಮಪದಗಳ ಸಮೂಹ); [3] **कारकान्विता क्रिया** (ಕಾರಕ ವಿಭಕ್ತಿಗಳಿಂದ ಕೂಡಿ ಕ್ರಿಯಾಬೋಧಕವಾಗುವಂತೆ ಇರುವ ಶಬ್ದ ಸಮುದಾಯ—'**कारकविशिष्टक्रियाबोधकतिङ्सुबन्तचयः**')

---

1-2. **तिङन्त, सुबन्त** ಗಳೆಂಬ ಶಬ್ದಗಳು ಸಂಸ್ಕೃತ ವ್ಯಾಕರಣದಲ್ಲಿ ರೂಢಿಯಾಗಿರುವ ಪಾರಿಭಾಷಿಕ ಶಬ್ದಗಳು (Technical terms of Samskrit Grammar). **तिङन्त** ಎಂದರೆ **तिङ्** ವಿಭಕ್ತಿಗಳಿಂದ ಕೂಡಿರುವ ಕ್ರಿಯಾಪದ (Inflected verb). **ति तः अन्ति ; सि थः थ** ಮುಂತಾದ ಆಖ್ಯಾತ ಪ್ರತ್ಯಯಗಳಿಗೆ **तिङ्** ವಿಭಕ್ತಿಗಳೆಂದು ಹೆಸರು (Conjugational affixes or personal endings of verbs). **सुबन्त** ಎಂದರೆ **सुप्** ವಿಭಕ್ತಿಗಳಿಂದ ಕೂಡಿರುವ ನಾಮಪದ (Inflected noun). **सु औ जस्; अम् औट् शस्** ಮುಂತಾದ ಪ್ರತ್ಯಯಗಳಿಗೆ **सुप्** ವಿಭಕ್ತಿಗಳೆಂದು ಹೆಸರು (Case terminations of Nouns).

3. **कारकम्** ಎಂದರೆ ಕ್ರಿಯೆಯು ನಡೆಯಲು ಕಾರಣ ಅಥವಾ ನಿಮಿತ್ತ. ಇದು ವಿಭಕ್ತಿಯ ಅರ್ಥವನ್ನು ಒಂದು ಕ್ರಿಯೆಗೆ ಸಂಬಂಧಿಸಿ ತಿಳಿಸುತ್ತದೆ. ಈ ಸಂಬಂಧಗಳು ಆರು — **कर्तृ, कर्म, करण, सम्प्रदान, अपादान, अधिकरण** ಎಂದು ಷಷ್ಠೀ ವಿಭಕ್ತಿಯನ್ನು ಮಾತ್ರ ಬಿಟ್ಟು ಕ್ರಮವಾಗಿ ಪ್ರಥಮಾ ವಿಭಕ್ತಿಯಿಂದ ಸಪ್ತಮೀ ವಿಭಕ್ತಿವರೆಗೂ ಇರುವ ಆರು ವಿಭಕ್ತಿಗಳು ಈ ಸಂಬಂಧಗಳನ್ನು ತಿಳಿಸುತ್ತವೆ. ('Any thing that contributes to the accomplishment

श्रुतिः स्त्री वेद आम्नायः त्रयी धर्मस्तु तद्विधिः ।
स्त्रियां ऋक्सामयजुषी इति वेदास्त्रयस्त्रयी ॥ ३ ॥

ಶ್ರುತಿಃ ಸ್ತ್ರೀ ವೇದ ಆಮ್ನಾಯಃ ತ್ರಯೀ ಧರ್ಮಸ್ತು ತದ್ವಿಧಿಃ ।
ಸ್ತ್ರಿಯಾಂ ಋಕ್ಸಾಮಯಜುಷೀ ಇತಿ ವೇದಾಸ್ತ್ರಯಸ್ತ್ರಯೀ ॥ ೩ ॥

---

**‘पचति पश्य’**; **‘श्रीहर्षो निपुणः कविः’**; **‘हरिः मुक्तिं भक्ताय ददाति’** ಎಂದು ಕ್ರಮವಾಗಿ ಇದರ ಉದಾಹರಣೆಗಳು. ಮೂಲ ಸಂಸ್ಕೃತಿಯು ತಿಳಿಸುವ ಈ ಮೂರು ವಿಧವಾದ ವಾಕ್ಯಲಕ್ಷಣಗಳನ್ನು ಉದಾಹರಣಪುರಸ್ಸರವಾಗಿ ಚರ್ಚಿಸಿ, ಅದರ ತಾತ್ಪರ್ಯವನ್ನು ವ್ಯಾಖ್ಯಾನಕಾರರು ಈ ರೀತಿಯಾಗಿ ಹೇಳಿರುತ್ತಾರೆ—“**कारकान्वितक्रियाबोधकसुप्तिङन्तचयः**” ಎಂದು. (A collection of inflected nouns, or verbs, or both nouns and verbs, each set yielding a complete sense).

---

of an action is a Karaka. In cooking, for example—the fire, the furnace, the vessel, the food, the cook and his master are all helpers in the accomplishment of the action. Thus—‘The cook cooks food in a vessel by the fire from the furnace for his master.’ Here the cook is Agent Karaka, food is Object Karaka, vessel is Locative Karaka, fire is Instrumental Karaka, furnace is Ablative Karaka and master is the Dative Karaka.

The word Karaka has thus the same meaning as the word cause (**हेतु**) or occasion (**निमित्त**). The several causes and occasions that are required to complete an action will be Karakas. Out of the seven cases of declension of a Samskrit noun, six represent such relation with an action. The Genitive or the 6th case can never be directly related with an action and therefore can never stand in the relation of a Karaka to a verb.’)

शिक्षेत्यादि श्रुतेरङ्गमोंकारप्रणवौ समौ ।
इतिहासः पुरावृत्तमुदात्ताद्यास्त्रयः स्वराः ॥ ४ ॥

ಶಿಕ್ಷೇತ್ಯಾದಿ ಶ್ರುತೇರಂಗಮೋಂಕಾರಪ್ರಣವೌ ಸಮೌ |
ಇತಿಹಾಸಃ ಪುರಾವೃತ್ತಮುದಾತ್ತಾದ್ಯಾಸ್ತ್ರಯಃ ಸ್ವರಾಃ ॥ ೪ |

---

೩. **श्रुतिः, वेदः, आम्नायः, त्रयी** ಈ ೪, ವೇದಗಳಿಗೆ ಸಾಮಾನ್ಯವಾದ ಹೆಸರು; ಅವುಗಳಲ್ಲಿ ಒಂದೊಂದಕ್ಕೂ ಇದೇ ಹೆಸರು (The Vedas or any one of them). ಇವುಗಳಲ್ಲಿ **श्रुति, त्रयी** ಶಬ್ದಗಳು ಸ್ತ್ರೀಲಿಂಗಗಳು. **धर्मः** ಎಂದರೆ ವೇದಗಳಲ್ಲಿ ಹೇಳಿರುವ ಯಜ್ಞ, ದಾನ, ತಪಸ್ಸು ಮುಂತಾದ ವಿಧಿಗಳಿಗೆ ಹೆಸರು (Vedic rule or duty enjoined by the Vedas). **ऋक्, साम, यजुः** ಈ ೩, ಕ್ರಮವಾಗಿ ಋಗ್ವೇದ, ಸಾಮವೇದ, ಯಜುರ್ವೇದಗಳಿಗೆ ಹೆಸರು (Names of the Vedas—Rik, Sama and Yajus respectively). ಈ ೩ ವೇದಗಳಿಗೂ ಒಂದೇ ಹೆಸರು (a name for all the three together) **त्रयी** ಎಂದು; ಇದು ಸ್ತ್ರೀಲಿಂಗ ಶಬ್ದವು, **ऋक्** ಶಬ್ದವೂ ಸಹ ಸ್ತ್ರೀಲಿಂಗವು; **साम, यजुः** ಎಂಬ ಶಬ್ದಗಳು ನಪುಂಸಕಲಿಂಗಗಳು.

೪. **श्रुतेः अङ्गम्** ಎಂದರೆ ವೇದದ ಅಙ್ಗವು, ಶಿಕ್ಷಾ ಮುಂತಾದವು ಆರು. (The Vedangas). ಅವು ಯಾವುವೆಂದರೆ ಈ ಶ್ಲೋಕವು ತಿಳಿಸುವುದು—

**शिक्षा व्याकरणं छन्दः निरुक्तं ज्योतिषं तथा ।**
**कल्पश्चेति षडङ्गानि वेदस्याहुर्मनीषिणः ॥**

**ओङ्कारः, प्रणवः** ೨, ಪ್ರಣವ (The sacred syllable 'Om'). **इतिहासः, पुरावृत्तम्** ೨, ಭಾರತ ಮುಂತಾದ ಪುರಾತನ ಕಥೆಯ ಹೆಸರು (**इति-ह-आस**—'so indeed it was'; traditional account of former events, ancient history,

**आन्वीक्षिकी दण्डनीतिस्तर्कविद्यार्थशास्त्रयोः ।**
**आख्यायिकोपलब्धार्थी पुराणं पञ्चलक्षणम् ॥ ५ ॥**

ಆನ್ವೀಕ್ಷಿಕೀ ದಂಡನೀತಿಸ್ತರ್ಕವಿದ್ಯಾರ್ಥಶಾಸ್ತ್ರಯೋಃ ।
ಆಖ್ಯಾಯಿಕೋಪಲಬ್ಧಾರ್ಥಾ ಪುರಾಣಂ ಪಂಚಲಕ್ಷಣಮ್ ॥ ೫ ॥

**प्रबन्धकल्पना कथा प्रवह्लिका प्रहेलिका ।**
**स्मृतिस्तु धर्मसंहिता समाहृतिस्तु संग्रहः ॥ ६ ॥**

ಪ್ರಬಂಧಕಲ್ಪನಾ ಕಥಾ ಪ್ರವಹ್ಲಿಕಾ ಪ್ರಹೇಲಿಕಾ ।
ಸ್ಮೃತಿಸ್ತು ಧರ್ಮಸಂಹಿತಾ ಸಮಾಹೃತಿಸ್ತು ಸಂಗ್ರಹಃ ॥ ೬ ॥

---

legend etc.). **स्वराः** ಎಂದರೆ ಉದಾತ್ತ, ಅನುದಾತ್ತ, ಸ್ವರಿತಗಳೆಂಬ ಮೂರು ಸ್ವರಗಳು (The three vedic accents).

೫. **आन्वीक्षिकी** ಎಂಬುದು ನ್ಯಾಯಶಾಸ್ತ್ರಕ್ಕೂ (Logic), **दण्डनीतिः** ಎಂಬುದು ಅರ್ಥಶಾಸ್ತ್ರಕ್ಕೂ (Science of Judicature and Politics) ಹೆಸರು.

**आख्यायिका, उपलब्धार्था** ೨, ನಂಬಬಹುದಾದ ಕಥೆ (A credible story). **पुराणम्** ಎಂದರೆ ಐದು ಲಕ್ಷಣಗಳಿಂದ ಕೂಡಿದ ಪುರಾಣಸಾಮಾನ್ಯಕ್ಕೆ ಹೆಸರು (Puranas). ಪುರಾಣಗಳ ಐದು ಲಕ್ಷಣಗಳಾವುವೆಂದರೆ—.

**सर्गश्च प्रतिसर्गश्च वंशो मन्वन्तराणि च ।**
**वंशानुचरितं चैव पुराणं पञ्चलक्षणम् ॥**

೬. **कथा** ಎಂದರೆ ಸ್ವಲ್ಪ ಸತ್ಯಾಂಶದಿಂದ ಕೂಡಿದ ಕಲ್ಪಿತ ಕಥೆಗೆ ಹೆಸರು (A feigned story). **प्रवह्लिका, प्रहेलिका** ೨, ಗೂಢಾರ್ಥವುಳ್ಳ ಗ್ರಂಥ (A riddle).

**स्मृतिः** ಎಂದರೆ ಮನು ಮುಂತಾದವರು ಮಾಡಿರುವ ಧರ್ಮಶಾಸ್ತ್ರ (A code of laws). **समाहृतिः, संग्रहः** ೨, ಸಂಗ್ರಹವಾಗಿ ರಚಿತವಾದ ಗ್ರಂಥ (A compilation or abridgement).

समस्या तु समासार्था किंवदन्ती जनश्रुतिः ।
वार्ता प्रवृत्तिर्वृत्तान्त उदन्तः स्यादथाह्वयः ॥ ७ ॥

ಸಮಸ್ಯಾ ತು ಸಮಾಸಾರ್ಥಾ ಕಿಂವದಂತೀ ಜನಶ್ರುತಿಃ ।
ವಾರ್ತಾ ಪ್ರವೃತ್ತಿರ್ವೃತ್ತಾಂತ ಉದಂತಃ ಸ್ಯಾದಥಾಹ್ವಯಃ ॥ ೭ ॥

आख्याह्वे अभिधानं च नामधेयं च नाम च ।
हूतिराकारणाह्वानं संहूतिर्बहुभिः कृता ॥ ८ ॥

ಆಖ್ಯಾಹ್ವೇ ಅಭಿಧಾನಂ ಚ ನಾಮಧೇಯಂ ಚ ನಾಮ ಚ ।
ಹೂತಿರಾಕಾರಣಾಹ್ವಾನಂ ಸಂಹೂತಿರ್ಬಹುಭಿಃ ಕೃತಾ ॥ ೮ ॥

विवादो व्यवहारः स्यादुपन्यासस्तु वाङ्मुखम् ।
उपोद्धात उदाहारः शपनं शपथः पुमान् ॥ ९ ॥

ವಿವಾದೋ ವ್ಯವಹಾರಃ ಸ್ಯಾದುಪನ್ಯಾಸಸ್ತು ವಾಙ್ಮುಖಮ್ ।
ಉಪೋದ್ಘಾತ ಉದಾಹಾರಃ ಶಪನಂ ಶಪಥಃ ಪುಮಾನ್ ॥ ೯ ॥

---

೭. **समस्या** ಎಂದರೆ ಪೂರ್ಣಮಾಡಿ ಹೇಳಲು ಕೊಡುವ ಪದ್ಯದ ಅಥವಾ ಶ್ಲೋಕದ ಒಂದು ಭಾಗ (Part of a stanza given to another person to be completed). **किंवदन्ती, जनश्रुतिः** ೨, ಜನರು ಆಡಿಕೊಳ್ಳುವ ಅಥವಾ ಅವರಿಂದ ಕೇಳಿಬಂದ ಮಾತು (A rumour). **वार्ता, प्रवृत्तिः, वृत्तान्तः, उदन्तः** ೪, ವೃತ್ತಾಂತ ಅಥವಾ ಸಮಾಚಾರ (Tidings or news).

೮. **आह्वयः, आख्या, आह्वा, अभिधानम्, नामधेयम्, नाम** ೬, ಹೆಸರು (Name). **हूतिः, आकारणा, आह्वानम्** ೩, ಕರೆಯುವುದು (A call or invitation). **संहूतिः** ಎಂದರೆ ಬಹು ಮಂದಿ ಒಟ್ಟಿಗೆ ಮಾಡುವ ಕರೆ (Clamour).

**प्रश्नोऽनुयोगः पृच्छा च प्रतिवाक्योत्तरे समे ।**
**मिथ्याभियोगोऽभ्याख्यानमथ मिथ्याभिशंसनम् ॥१०॥**

ಪ್ರಶ್ನೋಽನುಯೋಗಃ ಪೃಚ್ಛಾ ಚ ಪ್ರತಿವಾಕ್ಯೋತ್ತರೇ ಸಮೇ ।
ಮಿಥ್ಯಾಭಿಯೋಗೋಽಭ್ಯಾಖ್ಯಾನಮಥ ಮಿಥ್ಯಾಭಿಶಂಸನಮ್ ॥ ೧೦ ॥

**अभिशापः प्रणादस्तु शब्दः स्यादनुरागजः ।**
**यशः कीर्तिः समज्ञा च स्तवः स्तोत्रं स्तुतिर्नुतिः ॥११॥**

ಅಭಿಶಾಪಃ ಪ್ರಣಾದಸ್ತು ಶಬ್ದಃ ಸ್ಯಾದನುರಾಗಜಃ ।
ಯಶಃ ಕೀರ್ತಿಃ ಸಮಜ್ಞಾ ಚ ಸ್ತವಃ ಸ್ತೋತ್ರಂ ಸ್ತುತಿರ್ನುತಿಃ ॥ ೧೧ ॥

---

೯. **विवादः, व्यवहारः** ೨, ವ್ಯಾಜ್ಯ, ದಾವೆಮಾಡುವಿಕೆ (A law-suit or a contest). **उपन्यासः, वाङ्मुखम्** ೨, ವಚನಾರಂಭ (Exordium or declaration). **उपोद्घातः, उदाहारः** ೨, ಪೀಠಿಕೆ ಅಥವಾ ಉದಾಹರಣೆಯನ್ನು ಕೊಡುವುದು (An introduction or illustration). **शपनम्, शपथः** ೨, ಆಣೆ ಇಟ್ಟು ಕೊಳ್ಳುವುದು (An oath).

೧೦. **प्रश्नः, अनुयोगः, पृच्छा** ೩, ಪ್ರಶ್ನೆ (a question) **प्रतिवाक्यम्, उत्तरम्** ೨, ಉತ್ತರ (an answer). **मिथ्याभियोगः अभ्याख्यानम्** ೨, ಇಲ್ಲದುದನ್ನು ಕಲ್ಪನೆಮಾಡಿ ಆಕ್ಷೇಪಿಸುವಿಕೆ (Groundless accusation). **मिथ्याभिशंसनम्, अभिशापः** ೨, ಇಲ್ಲದ ಅಪರಾಧಗಳನ್ನು ಹೂಡಿ ಚಾಡಿ ಹೇಳುವುದು (Slander or false accusation).

೧೧. **प्रणादः** ಎಂದರೆ ಪ್ರೀತಿಯಿಂದಾಗಲಿ ಸಂತೋಷದಿಂದಾಗಲಿ ಆಡಿದ ಶಬ್ದ ಅಥವಾ ಮಾತು (A word, speech or sound expressive of affection and delight). **यशः, कीर्तिः, समज्ञा** ೩, ಕೀರ್ತಿಗೆ ಹೆಸರು (Fame). **स्तवः, स्तोत्रम्, स्तुतिः, नुतिः** ೪, ಸ್ತೋತ್ರ ಅಥವಾ ಕೊಂಡಾಡುವಿಕೆಗೆ ಹೆಸರು (Praise).

आम्रेडितं द्विस्त्रिरुक्तमुच्चैर्घुष्टं तु घोषणा ।
काकुः स्त्रियां विकारो यः शोकभीत्यादिभिर्ध्वनेः ॥१२॥

ಆಮ್ರೇಡಿತಂ ದ್ವಿಸ್ತ್ರಿರುಕ್ತಮುಚ್ಚೈರ್ಘುಷ್ಟಂ ತು ಘೋಷಣಾ ।
ಕಾಕುಃ ಸ್ತ್ರಿಯಾಂ ವಿಕಾರೋ ಯಃ ಶೋಕಭೀತ್ಯಾದಿಭಿರ್ಧ್ವನೇಃ ॥ ೧೨ ॥

अवर्णाक्षेपनिर्वादपरीवादापवादवत् ।
उपक्रोशो जुगुप्सा च कुत्सा निन्दा च गर्हणे ॥ १३ ॥

ಅವರ್ಣಾಕ್ಷೇಪನಿರ್ವಾದಪರೀವಾದಾಪವಾದವತ್ ।
ಉಪಕ್ರೋಶೋ ಜುಗುಪ್ಸಾ ಚ ಕುತ್ಸಾ ನಿಂದಾ ಚ ಗರ್ಹಣೇ ॥ ೧೩ ॥

पारुष्यमतिवादः स्याद्भर्त्सनं त्वपकारगीः ।
यः सनिन्द उपालम्भस्तत्र स्यात्परिभाषणम् ॥ १४ ॥

ಪಾರುಷ್ಯಮತಿವಾದಃ ಸ್ಯಾದ್ಭರ್ತ್ಸನಂ ತ್ವಪಕಾರಗೀಃ ।
ಯಃ ಸನಿಂದ ಉಪಾಲಂಭಸ್ತತ್ರ ಸ್ಯಾತ್ಪರಿಭಾಷಣಮ್ ॥ ೧೪ ॥

---

೧೨. **आम्रेडितम्** ಎಂದರೆ ಹೇಳಿದುದನ್ನೇ ಎರಡು ಮೂರು ಸಾಂ ಹೇಳುವುದು (Repetition). **उच्चैर्घुष्टम्, घोषणा** ೨ ಘಟ್ಟಿಯಾಗಿ ಕೂಗುವುದು (Shout).

**काकुः** ಎಂದರೆ ಶೋಕ, ಭೀತಿ, ಪ್ರೀತಿಮುಂತಾದವುಗಳನ್ನು ಸೂಚಿಸುವ ಧ್ವನಿವಿಕಾರ (A change of tone or voice resulting from grief, fear, affection, anger etc.).

೧೩. **अवर्णः**, **आक्षेपः**, **निर्वादः**, **परीवादः**, **अपवादः**, **उपक्रोशः**, **जुगुप्सा**, **कुत्सा**, **निन्दा**, **गर्हणम्** ಈ ೧೦, ನಿಂದೆ ಅಥವಾ ಅಲೆಗಳೆಯುವಿಕೆಗೆ ಹೆಸರು (Blame, censure or contempt). **अवर्ण** ಶಬ್ದದಿಂದ **उपक्रोश** ಶಬ್ದದ ಪೂರ್ತಿ ಇರುವ ಶಬ್ದಗಳೆಲ್ಲವೂ ಪುಲ್ಲಿಂಗಗಳೆಂದು ತಿಳಿಯುಬೇಕು.

तत्र त्वाक्षारणा यः स्यादाक्रोशो मैथुनं प्रति ।
[1]स्यादाभाषणमालापः प्रलापोऽनर्थकं वचः ॥ १५ ॥

ತತ್ರ ತ್ವಾಕ್ಷಾರಣಾ ಯಃ ಸ್ಯಾದಾಕ್ರೋಶೋ ಮೈಥುನಂ ಪ್ರತಿ ।
[1]ಸ್ಯಾದಾಭಾಷಣಮಾಲಾಪಃ ಪ್ರಲಾಪೋಽನರ್ಥಕಂ ವಚಃ ॥ ೧೫ ॥

[2]अनुलापो मुहुर्भाषा विलापः परिदेवनम् ।
[3]विप्रलापो विरोधोक्तिः संलापो भाषणं मिथः ॥ १६ ॥

[2]ಅನುಲಾಪೋ ಮುಹುರ್ಭಾಷಾ ವಿಲಾಪಃ ಪರಿದೇವನಮ್ ।
[3]ವಿಪ್ರಲಾಪೋ ವಿರೋಧೋಕ್ತಿಃ ಸಂಲಾಪೋ ಭಾಷಣಂ ಮಿಥಃ ॥ ೧೬ ॥

---

೧೪. **पारुष्यम्, अतिवादः** ೨, ನಿಷ್ಠುರವಾಗಿ ಮಾತನಾಡುವಿಕೆ (Harsh speech or reprcach). **भर्त्सनम्** ಎಂದರೆ ಬೆದರಿಕೆಯನ್ನುಂಟುಮಾಡುವ ಅಪಕಾರದ ಮಾತು (Threat). **उपालम्भः, परिभाषणम्** ೨, ನಿಂದೆಯಿಂದ ಕೂಡಿದ ಕೋಪದ ಮಾತು (Disparagement or reproof).

೧೫. **आक्षारणा** ಎಂದರೆ ಮೈಥುನೇಚ್ಛೆಯಿಂದ ಹಂಬಲಿಸಿ ಕೂಗುವುದು (Longing cry of animals in heat) ಅಥವಾ ಅಂತಹ ಕೆಟ್ಟ ಆಪಾದನೆ ಮಾಡುವುದು (or calumnious accusation of adultry). **आक्षारणम्** ಎಂದು ನಪುಂಸಕ ಶಬ್ದವೂ ಆಗುವುದು. **आभाषणम्, आलापः** ೨, ಹಿತನುಡಿ (Address). **प्रलापः** ಎಂದರೆ ವ್ಯರ್ಥವಾದ ಮಾತು (Prattle).

೧೬. **अनुलापः, मुहुर्भाषा** ೨, ಬಾರಿಬಾರಿಗೂ ಆಡುವ ಮಾತು (Reiteration). **विलापः, परिदेवनम्** ೨, ಅಳುವುದು ಅಥವಾ

---

1-4. ಉಪಸರ್ಗ ಸೇರಿದರೆ ಧಾತುವಿನ ಅರ್ಥವೇ ಬದಲಾಯಿಸುವುದು. **'उपसर्गेण धात्वर्थः बलादन्यत्र नीयते'** ಎಂಬುದಕ್ಕೆ ಈ ನಾಲ್ಕು ಪಙ್ಕ್ತಿಗಳಲ್ಲಿನ **'लप्'** ಧಾತುವಿನಿಂದ ಹುಟ್ಟಿದ ಪದಗಳು ಉದಾಹರಣೆ

[4]सुप्रलापः सुवचनमपलापस्तु निह्नवः ।
(चोद्यमाक्षेपाभियोगौ शापाक्रोशौ दुरेषणा ।
अस्त्री चाटु चटु श्लाघा प्रेम्णा मिथ्याविकत्थनम् ॥)
संदेशवाग्वाचिकं स्याद्वाग्भेदास्तु त्रिषूत्तरे ॥ १७ ॥

[4]ಸುಪ್ರಲಾಪಃ ಸುವಚನಮಪಲಾಪಸ್ತು ನಿಹ್ನವಃ ।
(ಚೋದ್ಯಮಾಕ್ಷೇಪಾಭಿಯೋಗೌ ಶಾಪಾಕ್ರೋಶೌ ದುರೇಷಣಾ ।
ಅಸ್ತ್ರೀ ಚಾಟು ಚಟು ಶ್ಲಾಘಾ ಪ್ರೇಮ್ಣಾ ಮಿಥ್ಯಾವಿಕತ್ಥನಮ್ ॥)
ಸಂದೇಶವಾಗ್ವಾಚಿಕಂ ಸ್ಯಾದ್ವಾಗ್ಭೇದಾಸ್ತು ತ್ರಿಷೂತ್ತರೇ ॥ ೧೭ ॥

---

ಅಳುತ್ತಾ ಮಾತನಾಡುವುದು (Lamentation). **विप्रलापः, विरोधोक्तिः** ೨, ಅನ್ಯೋನ್ಯವಿರುದ್ಧವಾಗಿ ಆಡುವ ಮಾತಿನ ಜಗಳ (Quarrel). **संलापः** ಎಂದರೆ ಪರಸ್ಪರ ಹಿತವಾಗಿ ಆಡುವ ಮಾತು (Conversation).

೧೭. **सुप्रलापः, सुवचनम्** ೨, ಒಳ್ಳೆಯ ಮಾತು (Good speech). **अपलापः, निह्नवः** ೨, ಮೋಸದ ಮಾತು (Denial or concealment of knowledge; turning off the truth).

ಈ ಶ್ಲೋಕದ ಹೆಚ್ಚಿಗೆಯ ಪಾಠದಲ್ಲಿರುವ ಪದಗಳು— **चोद्यम्, आक्षेपः, अभियोगः** ೩, ಆಕ್ಷೇಪಣೆ (A charge or objection

---

ಯಾಗಿವೆ. **लप् (व्यक्तायां वाचि)** ಎಂಬ ಧಾತುವಿಗೆ **प्र, आ, अनु, वि** ಮುಂತಾದ ಉಪಸರ್ಗಗಳನ್ನು ಸೇರಿಸಿದರೆ ಧಾತುವಿನ ಅರ್ಥಬದಲಾವಣೆ ಹೇಗೆ ಎಂದರೆ—**आ + √ लप्** = ಹಿತವಾಗಿ ನುಡಿ; **प्र + √ लप्** = ವ್ಯರ್ಥವಾಗಿ ಮಾತನಾಡು; **अनु + √ लप्** = ಪುನಃಪುನಃ ನುಡಿ; **वि + √ लप्** = ಅಳುತ್ತ ಮಾತನಾಡು; ಇದೇ ರೀತಿಯಾಗಿ **वि + प्र, सम्, सु+प्र, अप** ಮುಂತಾದ ಉಪಸರ್ಗಗಳಿಂದ ಕೂಡಿದ **लप्** ಧಾತುವಿನಿಂದಲೇ ಹುಟ್ಟಿರುವ ಪದಗಳನ್ನು ೩ ಮತ್ತು ೪ನೆಯ ಪಙ್ಕ್ತಿಗಳು ತಿಳಿಸುತ್ತವೆ.

**रुशती वागकल्याणी स्यात्कल्या तु शुभात्मिका ।**
**अत्यर्थमधुरं सान्त्वं संगतं हृदयंगमम् ॥ १८ ॥**

ರುಶತೀ ವಾಗಕಲ್ಯಾಣೀ ಸ್ಯಾತ್ಕಲ್ಯಾ ತು ಶುಭಾತ್ಮಿಕಾ ।
ಅತ್ಯರ್ಥಮಧುರಂ ಸಾಂತ್ವಂ ಸಂಗತಂ ಹೃದಯಂಗಮಮ್ ॥ ೧೮ ॥

**निष्ठुरं परुषं ग्राम्यमश्लीलं सूनृतं प्रिये ।**
**सत्येऽथ संकुलक्लिष्टे परस्परपराहते ॥ १९ ॥**

ನಿಷ್ಠುರಂ ಪರುಷಂ ಗ್ರಾಮ್ಯಮಶ್ಲೀಲಂ ಸೂನೃತಂ ಪ್ರಿಯೇ ।
ಸತ್ಯೇಽಥ ಸಂಕುಲಕ್ಲಿಷ್ಟೇ ಪರಸ್ಪರಪರಾಹತೇ ॥ ೧೯ ॥

---

or a query). **शापः, आक्रोशः, दुरेषणा** ३, ಶಪಿಸುವುದು (Cursing). **चाटु, चटु, श्लाघा** ३, ಪ್ರೇಮಾತಿಶಯದಿಂದ ಸುಮ್ಮನೆ ಹೊಗಳುವ ಮಾತು (Kind or flattering words; pleasing talk).

**संदेशवाक्, वाचिकम्** २, ದೂತನ ಮುಖಾಂತರ ಹೇಳಿ ಕಳುಹಿಸುವ ಮಾತು (A verbal commission or message).

ಇಲ್ಲಿಂದ ಮುಂದಕ್ಕೆ ವರ್ಗದ ಕೊನೆಯವರೆಗೂ ಹೇಳಿರುವ ಮಾತಿನ ಭೇದಗಳು, ಎಂದರೆ—**रुशती** ಶಬ್ದದಿಂದ **सम्यक्** ಶಬ್ದಪೂರ್ತಿ ಇರುವ ಶಬ್ದಗಳೆಲ್ಲವೂ, ಮೂರು ಲಿಂಗಗಳಲ್ಲಿಯೂ ಇರುತ್ತವೆ.

೧೮. **रुशती** ಎಂದರೆ ಅಶುಭವಾದ ಮಾತು (Inauspicious speech). **कल्या** ಎಂದರೆ ಶುಭವಾದ ಮಾತು (Agreeable and auspicious speech). **सान्त्वम्** ಎಂದರೆ ಅತ್ಯಂತ ಮಧುರವಾದ ಮಾತು (Very sweet and conciliating speech). **संगतम्, हृदयङ्गमम्** ೨, ಮನಸ್ಸಿಗೆ ಒಪ್ಪುವಂತಹ ಮಾತು (Apposite and agreeable speech).

लुप्तवर्णपदं ग्रस्तं निरस्तं त्वरितोदितम् ।
अम्बूकृतं सनिष्ठीवमबद्धं स्यादनर्थकम् ॥ २० ॥

ಲುಪ್ತವರ್ಣಪದಂ ಗ್ರಸ್ತಂ ನಿರಸ್ತಂ ತ್ವರಿತೋದಿತಮ್ ।
ಅಂಬೂಕೃತಂ ಸನಿಷ್ಠೀವಮಬದ್ಧಂ ಸ್ಯಾದನರ್ಥಕಮ್ ॥ ೨೦ ॥

अनक्षरमवाच्यं स्यादाहतं तु मृषार्थकम् ।
(सोल्लुण्ठनं तु सोत्प्रासं मणितं रतिकूजितम् ।
श्राव्यं हृद्यं मनोहारि विस्पष्टं प्रकटोदितम् ।)
अथ म्लिष्टमविस्पष्टं वितथं त्वनृतं वचः ॥ २१ ॥

ಅನಕ್ಷರಮವಾಚ್ಯಂ ಸ್ಯಾದಾಹತಂ ತು ಮೃಷಾರ್ಥಕಮ್ ।
(ಸೋಲ್ಲುಂಠನಂ ತು ಸೋತ್ಪ್ರಾಸಂ ಮಣಿತಂ ರತಿಕೂಜಿತಮ್ ।
ಶ್ರಾವ್ಯಂ ಹೃದ್ಯಂ ಮನೋಹಾರಿ ವಿಸ್ಪಷ್ಟಂ ಪ್ರಕಟೋದಿತಮ್ ।)
ಅಥ ಮ್ಲಿಷ್ಟಮವಿಸ್ಪಷ್ಟಂ ವಿತಥಂ ತ್ವನೃತಂ ವಚಃ ॥ ೨೧ ॥

---

೧೯. **निष्ठुरम्, परुषम्** ೨, ಕಠಿಣವಾದ ಮಾತು (Harsh speech) **ग्राम्यम्, अश्लीलम्** ೨, ಗ್ರಾಮ್ಯಭಾಷೆ (Rustic speech) **सूनृतम्** ಎಂದರೆ ಪ್ರಿಯವೂ ಸತ್ಯವೂ ಆದ ಮಾತು (Speech pleasant and true). **संकुलम्, क्लिष्टम्** ೨, ಪರಸ್ಪರ ವಿರುದ್ಧವಾದ, ಅನ್ವಯಿಸಲು ಕಷ್ಟವಾದ ಮಾತು (Inconsistent and perplexing speech).

೨೦. **ग्रस्तम्** ಎಂದರೆ ವರ್ಣಲೋಪದಿಂದ ಉಚ್ಚರಿಸಲ್ಪಡುವ ಮಾತು (Inarticulate or slurred speech) **निरस्तम्** ತ್ವರೆಯಿಂದ ಆಡಿದ ಮಾತು (Rapid speech) **अम्बूकृतम्** ಜೊಲ್ಲಿನ ತುಂತುರುಗಳಿಂದ ಕೂಡಿದ ಮಾತು (Sputtered speech) **अबद्धम्** ಅರ್ಥರಹಿತವಾದ ಮಾತು (Unmeaning speech).

# सत्यं तथ्यमृतं सम्यगमूनि त्रिषु तद्वति ।
# शब्दे निनादनिनदध्वनिध्वानरवस्वनाः ॥ २२ ॥

ಸತ್ಯಂ ತಥ್ಯಮೃತಂ ಸಮ್ಯಗಮೂನಿ ತ್ರಿಷು ತದ್ವತಿ ।
ಶಬ್ದೇ ನಿನಾದನಿನದಧ್ವನಿಧ್ವಾನರವಸ್ವನಾಃ ॥ ೨೨ ॥

---

೨೧. **अनक्षरम्, अवाच्यम्** ೨, ಉಚ್ಚರಿಸಲು ಅರ್ಹವಲ್ಲದ ಮಾತು (Not worthy of utterance). **आहतम्** ಅಸಂಭವವಾದ ಅರ್ಥವುಳ್ಳ ಮಾತು (Assertion of an absurdity or impossibility).

ಈ ಪಙ್ಕ್ತಿಯ ಮುಂದಿನ ಹೆಚ್ಚಿಗೆಯ ಪಾಠದ ಪದಗಳು **सोल्लुण्ठनम्, सोत्प्रासम्** ೨, ಹಾಸ್ಯದ ಮಾತು (Jesting talk) **मणितम्, रतिकूजितम्** ೨, ರತಿಧ್ವನಿ (Lascivious murmur). **श्राव्यम्, हृद्यम्, मनोहारि** ೩, ಮನಸ್ಸಿಗೆ ಹಿತವಾದ ಮಾತು (Speech dear and delightful to the heart). **विस्पष्टम्, प्रकटोदितम्** ೨, ಸ್ಪಷ್ಟವಾಗಿ ಹೇಳಿದ ಮಾತು (A plain speech).

**म्लिष्टम्, अविस्पष्टम्** ೨, ಅಸ್ಪಷ್ಟವಾದ ಮಾತು (Unintelligible speech), **वितथम्** ಸುಳ್ಳುಮಾತು (False speech).

೨೨. **सत्यम्, तथ्यम्, ऋतम्, सम्यक्** ೪, ಸತ್ಯವಾದ ಮಾತು (True speech).

ಹಿಂದೆ ೧೭ನೆಯ ಶ್ಲೋಕದಲ್ಲಿ '**वाग्भेदास्तु त्रिषूत्तरे**' ಎಂದು ಹೇಳಿರುವಂತೆ, ಮಾತಿನ ಒಂದು ವಿಶೇಷವನ್ನು ತಿಳಿಸುವ ಈ **सत्यम्, तथ्यम्** ಮುಂತಾದ ೪ ಶಬ್ದಗಳೂ ಕೂಡ ಮೂರು ಲಿಂಗಗಳಲ್ಲಿಯೂ ಇರುತ್ತವೆ. ಹೇಗೆಂದರೆ-'**सत्यः शब्दः**' '**सत्या वाक्**' '**सत्यं वचनम्**' ಹಾಗೆಯೇ ಈ ಶಬ್ದಗಳು ಮಾತನಾಡುವವರ ಗುಣವನ್ನು ತಿಳಿಸುವಾಗಲೂ ಮೂರು ಲಿಂಗಗಳಲ್ಲಿಯೂ ಇರುತ್ತವೆ. ಉದಾ:— '**सत्यः पुरुषः**' '**सत्या स्त्री**' '**सत्यं कुलम्**'.

स्वाननिर्घोषनिर्ह्रादनादनिस्वाननिस्वनाः ।
आरवारावसंरावविरावा अथ मर्मरः ॥ २३ ॥

ಸ್ವಾನನಿರ್ಘೋಷನಿರ್ಹ್ರಾದನಾದನಿಸ್ವಾನನಿಸ್ವನಾಃ ।
ಆರವಾರಾವಸಂರಾವವಿರಾವಾ ಅಥ ಮರ್ಮರಃ ॥ ೨೩ ॥

स्वनिते वस्त्रपर्णानां भूषणानां तु शिञ्जितम् ।
निक्वाणो निक्वणः क्वाणः क्वणः क्वणनमित्यपि ॥२४॥

ಸ್ವನಿತೇ ವಸ್ತ್ರಪರ್ಣಾನಾಂ ಭೂಷಣಾನಾಂ ತು ಶಿಂಜಿತಮ್ ॥
ನಿಕ್ವಾಣೋ ನಿಕ್ವಣಃ ಕ್ವಾಣಃ ಕ್ವಣಃ ಕ್ವಣನಮಿತ್ಯಪಿ ॥ ೨೪ ॥

वीणायाः क्वणिते प्रादेः प्रक्वाणप्रक्वणादयः ।
कोलाहलः कलकलस्तिरश्चां वाशितं रुतम् ॥ २५ ॥
स्त्री प्रतिश्रुत्प्रतिध्वाने गीतं गानमिमे समे ।

॥ इति शब्दादिवर्गः ॥

ವೀಣಾಯಾಃ ಕ್ವಣಿತೇ ಪ್ರಾದೇಃ ಪ್ರಕ್ವಾಣಪ್ರಕ್ವಣಾದಯಃ ।
ಕೋಲಾಹಲಃ ಕಲಕಲಸ್ತಿರಶ್ಚಾಂ ವಾಶಿತಂ ರುತಮ್ ॥ ೨೫ ॥
ಸ್ತ್ರೀ ಪ್ರತಿಶ್ರುತ್ಪ್ರತಿಧ್ವಾನೇ ಗೀತಂ ಗಾನಮಿಮೇ ಸಮೇ ।

॥ ಇತಿ ಶಬ್ದಾದಿವರ್ಗಃ ॥

---

೨೨-೨೩. **शब्दः, निनादः, निनदः, ध्वनिः, ध्वानः, रवः, स्वनः, स्वानः, निर्घोषः, निर्ह्रादः, नादः, निस्वानः, निस्वनः, आरवः, आरावः, संरावः, विरावः** ಈ ೧೭ ಧ್ವನಿ, ಶಬ್ದ, ಸದ್ದು ಇವುಗಳ ಸಾಮಾನ್ಯವಾದ ಹೆಸರು (Sound in general). **मर्मरः** ಎಂದರೆ ವಸ್ತ್ರಗಳ ಅಥವಾ ಎಲೆಗಳ ಶಬ್ದ (Rustling).

೨೪. **शिञ्जितम्** ಎಂದರೆ ಆಭರಣಗಳ ಧ್ವನಿ (Tinkling of

metallic ornaments). **निक्वाणः**, **निक्वणः**, **क्वाणः**, **क्वणः**, **क्वणनम्** ೫, ವೀಣೆ ಮುಂತಾದ ವಾದ್ಯದ ಧ್ವನಿ (Sound of musical instruments like the lute etc.).

೨೫. **प्र** ಮುಂತಾದ ಉಪಸರ್ಗದಿಂದ ಕೂಡಿದ **प्रक्वाणः**, **प्रक्वणः** ಮುಂತಾದ ಶಬ್ದಗಳು (ಎಂದರೆ- **सुक्वाणः**, **सुक्वणः**, **उपक्वाणः** **उपक्वणः** ಮುಂತಾದವೂ ಸಹ) ವೀಣೆಯ ಧ್ವನಿಗೆ ಮಾತ್ರ ಹೆಸರುಗಳು (Sound of a lute or Veena only).

**कोलाहलः**, **कलकलः** ೨, ಗುಂಪಿನ ಗಲಭೆಗೆ ಹೆಸರು (A confused noise of a crowd). **वासितम्** ಎಂದರೆ ಮೃಗ, ಪಕ್ಷಿ ಮೊದಲಾದ ಪ್ರಾಣಿಗಳು ಮಾಡುವ ಧ್ವನಿ (Cry of animals and birds).

**प्रतिश्रुत्** (ಸ್ತ್ರೀಲಿಂಗ ಶಬ್ದ) ಮತ್ತು **प्रतिध्वानः** ಈ ೨, ಪ್ರತಿಧ್ವನಿಗೆ ಹೆಸರು (An echo). **गीतम्**, **गानम्** ಈ ೨, ಹಾಡು ಅಥವಾ ಹಾಡುಗಾರಿಕೆಗೆ ಹೆಸರು (Song or singing).

---

**ಈ ಶಬ್ದಾದಿವರ್ಗದಲ್ಲಿ ಹೇಳಿರುವ ಕೆಲವು ಶಬ್ದಗಳ ಸ್ವಲ್ಪ ಹೆಚ್ಚಿಗೆಯ ಪರಿಚಯವು ಆವಶ್ಯಕವೆಂದು ಈ ಕೆಳಗಿನ ಟಿಪ್ಪಣಿ ಕೊಡಲಾಗಿದೆ.**

**ಪುಟ 75, ಶ್ಲೋಕ 3.— श्रुतिः** ಎಂಬ ಸ್ತ್ರೀಲಿಂಗ ಶಬ್ದವು **श्रु- श्रवणे** (To hear, to listen to) ಎಂಬ ಧಾತುವಿನಿಂದ ಹುಟ್ಟಿ ಕಿವಿಯಿಂದ ಕೇಳಿ ತಿಳಿದುಬಂದುದು ಎಂದು ಅರ್ಥವಾಗುವುದು. ವೇದಗಳು ಋಷಿಗಳಿಂದ ಕೇಳಿ ತಿಳಿದು ಬಂದುದೇ ಆಗಿರುವುದರಿಂದ ವೇದಗಳಿಗೆ **श्रुति** ಎಂದು ಹೆಸರು ಬಂದಿದೆ (That which has been heard by the Rishis and communicated orally by them, with all the sounds, syllables, accents, words etc., of

the text quite in tact, is known as the *Sruti* or the Vedas. They are said to contain 'eternal sounds or words as eternally heard' by the holy Rishis and so they differ from *Smriti* or what is only remembered and passed on in writing by human authors).

**ಪುಟ 76, ಶ್ಲೋಕ 4.**–**श्रुतेरङ्गम्** ಎಂದರೆ ಈ ಆರು:- 1) **शिक्षा**, the science of proper articulation and pronunciation; 2) **कल्पः**, the rituals and ceremonials with their rules of porcedure laid down; 3) **व्याकरणम्**, the science of grammar; 4) **निरुक्तम्**, the etymological explanations of different Vedic words, such as Yaska's *Nirukta*; 5) **ज्योतिषम्**, the science of Astronomy which gives the sacrificial days by marking the courses of the planets etc., and 6) **छन्दः**, the discussion of the Vedic metres.

**ಪುಟ 77, ಶ್ಲೋಕ 5-6.**— **आख्यायिका** ಮತ್ತು **कथा** ಎಂಬುದಕ್ಕೆ ಬಾಣಭಟ್ಟನ ಪ್ರಸಿದ್ಧ ಗದ್ಯ ಕಾವ್ಯಗಳಾದ 'ಹರ್ಷಚರಿತ'ವು ಮತ್ತು ಅವನ 'ಕಾದಂಬರೀ' ಕಥೆಯು ಕ್ರಮವಾದ ಉದಾಹರಣೆಗಳು. (Both are prose compositions with only a little difference. In an *Akhyayika*, everything is the same as in a *Katha*, but in the former the author includes an account of himself and his family, employs the Vaktra and Apavaktra metres for the

verses contained therein, and divides the chapters into what are called Ucchvasas).

**प्रवह्लिका, प्रहेलिका** ಎಂದರೆ ಗೂಢಾರ್ಥದಿಂದ ಕೂಡಿದ ಮಾತು, ತೊಡಕು, ಒಗಟು ಮುಂತಾದುದು (An enigma, riddle, puzzling question or statement). ಇವಕ್ಕೆ ಕೆಲವು ಸುಭಾಷಿತಗಳು ಉದಾಹರಣೆಗಳಾಗಿವೆ—

**अपदो दूरगामी च साक्षरो न च पण्डितः ।**
**अमुखः स्फुटवक्ता च यो जानाति स पण्डितः ॥**

ಇದರ ಗೂಢಾರ್ಥವೇನೆಂದರೆ, ಲೇಖಪತ್ರ (A letter received from a distant place is the answer to this riddle).

**एकोना विंशतिः स्त्रीणां स्नानार्थं सरयूं गता ।**
**विंशतिः पुनरायाता एको व्याघ्रेण भक्षितः ॥**

ಇಲ್ಲಿ **एकोना** ಎಂಬುದನ್ನು **विंशतिः** ಎಂಬುದರ ವಿಶೇಷಣವಾಗಿ ಭಾವಿಸಿದರೆ ಅರ್ಥವಾಗದೆ ತೊಡಕುಂಟಾಗುವುದು. **एको ना** ಎಂದು ಪದವಿಭಾಗಮಾಡಿಕೊಂಡರೆ ಆಗ **ना** ಎಂದರೆ **नरः** ಎಂದು ಅರ್ಥವಾಗಿ ಶ್ಲೋಕದ ತಾತ್ಪರ್ಯವು ಸರಿಹೋಗುವುದು (If **एकोना विंशतिः** is taken to mean nineteen, then comes the puzzle ; if **एको** and **ना** are taken separately to mean a man, the puzzle gets solved).

**स्मृतिः** ಎಂದರೆ ವೇದಗಳಲ್ಲಿ ಹೇಳಿರುವ ಧರ್ಮವನ್ನೂ ಅದರ ಮರ್ಮವನ್ನೂ ವಿವರಿಸಿ ಜನರಿಗೆ ತಿಳಿಸತಕ್ಕ ಧರ್ಮಶಾಸ್ತ್ರಗ್ರಂಥಗಳು. "ಮನುಸ್ಮೃತಿ", "ಪರಾಶರಸ್ಮೃತಿ", "ಯಾಜ್ಞವಲ್ಕ್ಯಸ್ಮೃತಿ" ಇವೇ ಮುಂತಾದುವೇ ಉದಾಹರಣೆಗಳು. ಈ **स्मृति** ಯ ವಿಚಾರದಲ್ಲಿ Monier Williams ಮಹಾಶಯರು ಹೇಳಿರುವ ಈ ಕೆಳಗಿನ ಅಂಶವು ಗ್ರಾಹ್ಯವೂ, ಆದರಣೀಯವೂ ಆಗಿದೆ.

" *Smriti* is the whole body of sacred tradition or what is remembered by human teachers in contradistinction to *Sruti* or what is directly heard or revealed to the Rishis; in its widest acceptation the use of the term Smriti includes the 6 Vedangas, the Sutras, both *Srauta* and *Grihya*, the law books of Manu, Yajnavalkya and the 16 succeeding inspired law-givers viz., Atri, Vishnu, Harita, Usanas, Angiras, Yama, Apastamba, Katyayana, Brihaspati, Parasara, Vyasa,..........., all these law-givers being held to be inspired and to have based their precepts on the Veda."

**ಪುಟ 78, ಶ್ಲೋಕ 7.— समस्या** ಎಂದರೆ ಕವಿಯ ಶಕ್ತಿಯನ್ನು ಪರೀಕ್ಷಿಸಲು ಕೊಡುವ ಶ್ಲೋಕದ ಒಂದು ಭಾಗ. ಆ ಭಾಗವನ್ನು ಸೇರಿಸಿಕೊಂಡು ಕವಿಯು ಒಂದು ಪೂರ್ಣಶ್ಲೋಕವನ್ನು ಮಾಡುವನು. (To test a poet's ability, part of a stanza is given to him to be completed; such a bit of the full stanza to be composed is called *Samasya*).

ಉದಾ:—"**जामाता दशमो ग्रहः**" ('Son-in-law is the 10th planet') ಎಂಬ ಸಮಸ್ಯೆಯು ಈ ಕೆಳಗೆ ಕಂಡ ರೀತಿಗಳಲ್ಲಿ ಕವಿಯಿಂದ ಪೂರ್ಣಮಾಡಲ್ಪಟ್ಟಿದೆ.

**(१) आदित्याद्या ग्रहाः सर्वे यथा तुष्यन्ति दानतः ।**
**सर्वस्वेऽपि न तुष्येत जामाता दशमो ग्रहः ॥**

**(२) सदा वक्रः सदा क्रूरः सदा पूजामपेक्षते ।**
**कन्याराशिगतो नित्यं जामाता दशमो ग्रहः ॥**

ಕೆಲವು ನಿಪುಣ ಕವಿಗಳು ಕೇವಲ ಶಬ್ದಸೂಚಕ ಪದಗಳಿಂದಲೇ ಕೂಡಿದ ಪಾದವನ್ನು (A line consisting of words denoting mere sounds) ಸಮಸ್ಯೆಯಾಗಿ ತೆಗೆದುಕೊಂಡು ಶ್ಲೋಕವನ್ನು ಪೂರ್ಣಮಾಡಿದ್ದಾರೆ. ಹೇಗೆಂದರೆ—

**जम्बूफलानि पक्वानि पतन्ति विमले जले ।**
**कपिकम्पितशाखाभ्यो गुलुगुग्गुलुगुग्गुलु ॥**

**ಪುಟ 84, ಶ್ಲೋಕ 21.— आहतम्**—ಅಸಂಭವದ ಮಾತು, (Assertion of an absurdity or impossibility) ಎಂಬುದಕ್ಕೆ ಉದಾಹರಣೆ—

**एष वन्ध्यासुतो याति खपुष्पकृतशेखरः ।**
**मृगतृष्णाम्भसि स्नातः शशशृङ्गधनुर्धरः ॥**

(ಬಂಜೆಯ ಮಗನು ಮರೀಚಿಕೆಯಲ್ಲಿ, ಎಂದರೆ ನೀರಿನಂತೆ ಕಾಣುವ ನೀರಿಲ್ಲದ ಸ್ಥಳದಲ್ಲಿ, ಸ್ನಾನಮಾಡಿ, ಆಕಾಶದಲ್ಲಿ ಹುಟ್ಟಿದ ಹೂವನ್ನು ಶಿರೋಭೂಷಣವಾಗಿ ಮಾಡಿಕೊಂಡು, ಮೊಲದ ಕೊಂಬಿನ ಧನುಸ್ಸನ್ನು ಧರಿಸಿ ಹೊರಟಿದ್ದಾನೆ.) This is a series of impossibilities, or absurdities. Sometimes such statements are made to yield some sense when associated with divine miracles or when figuratively employed to express the sentiment of wonder, as in the following stanza.

**अम्बुजमम्बुनि जातं न हि दृष्टं जातमम्बुजादम्बु ।**
**अधुना तद्विपरीतं चरणसरोजाद्विनिर्गता गङ्गा ॥**

[ಕಮಲವು ನೀರಿನಲ್ಲಿ ಹುಟ್ಟುವುದು. ಆದರೆ ಕಮಲದಿಂದ ನೀರು ಹುಟ್ಟುವುದನ್ನು ಯಾರೂ ಕಂಡಿಲ್ಲ. ಈಗ ಅದರ ವಿಪರೀತವು ಕಂಡುಬಂದಿದೆ ; (ನಿನ್ನ) ಪಾದಕಮಲದಿಂದ ಗಂಗೆಯು ಉದ್ಭವಿಸಿರುವುದು].

## ॥ अथ नाट्यवर्गः ॥

**निषादर्षभगान्धारषड्जमध्यमधैवताः ।**
**पञ्चमश्चेत्यमी सप्त तन्त्रीकण्ठोत्थिताः स्वराः ॥ १ ॥**

## ॥ ಅಥ ನಾಟ್ಯವರ್ಗಃ ॥

ನಿಷಾದರ್ಷಭಗಾಂಧಾರಷಡ್ಜಮಧ್ಯಮಧೈವತಾಃ ।
ಪಂಚಮಶ್ಚೇತ್ಯಮೀ ಸಪ್ತ ತಂತ್ರೀಕಂಠೋತ್ಥಿತಾಃ ಸ್ವರಾಃ ॥ ೧ ॥

---

೧. **निषादः, ऋषभः, गान्धारः, षड्जः, मध्यमः, धैवतः, पञ्चमः** ಇವುಗಳಿಗೆ [1](**सप्तस्वराः**) ಸಪ್ತಸ್ವರಗಳೆಂದು ಹೆಸರು (The seven musical notes). ಇವು ತಂತಿಗಳಿಂದಲೂ, ಕಂಠದಿಂದಲೂ ಸಹ ಹುಟ್ಟತಕ್ಕವು. ಇಲ್ಲಿ ಹೇಳಿರುವ ಒಂದೊಂದು ಹೆಸರಿನ ಮೊದಲನೆಯ ಅಕ್ಷರದಿಂದ ಕ್ರಮವಾಗಿ 'ನಿ, ರಿ, ಗ, ಸ, ಮ, ಧ, ಪ' ಎಂಬ ಸಪ್ತಸ್ವರಗಳ ಸಂಜ್ಞೆಯುಂಟಾಗಿದೆ.

---

1. ಈ ಸಪ್ತಸ್ವರಗಳಲ್ಲಿ ಯಾವ ಯಾವ ಸ್ವರವು ಸಾಮಾನ್ಯವಾಗಿ ಯಾವು ದರಹಾಗಿರುವುದೆಂದರೆ—ಈ ಶ್ಲೋಕವು ತಿಳಿಸುವುದು. "**षड्जं मयूरो वदति गावो नर्दन्ति चर्षभम् । अजाविकं तु गान्धारं, क्रौञ्चः क्वणति मध्यमम् ॥ पुष्पसाधारणे काले पिकः कूजति पञ्चमम् । धैवतं हेषते वाजी, निषादं बृंहते गजः ॥**" ನವಿಲಿನ ನುಡಿ **षड्ज** ವನ್ನೂ, ಎತ್ತಿನ ಸ್ವರ **ऋषभ** ವನ್ನೂ, ಆಡು ಕುರಿ ಮುಂತಾದವುಗಳ ಕೂಗು **गान्धार** ವನ್ನೂ, ಕ್ರೌಂಚ ಪಕ್ಷಿಯ ಧ್ವನಿಯು **मध्यम** ವನ್ನೂ, ವಸಂತದ ಕೋಗಿಲೆಯ ಧ್ವನಿ **पञ्चम** ವನ್ನೂ, ಕುದುರೆಯ ಧ್ವನಿ **धैवत** ವನ್ನೂ, ಆನೆಗಳ ಕೂಗು **निषाद** ಸ್ವರವನ್ನೂ ಸೂಚಿಸುವುದು. (The seven notes of the musical scale—Nishada, Rishabha, Gandhara etc. are said to resemble respectively the notes produced by an Elephant, Bull, Goat, Peacock, Heron, Horse and Cuckoo; and they are designated by their initial letters or syllables—*ni*, *ri*, *ga*, *sa*, *ma*, *dha*, *pa*.

काकली तु कले सूक्ष्मे ध्वनौ तु मधुरास्फुटे ।
कलो मन्द्रस्तु गम्भीरे तारोऽत्युच्चैस्त्रयस्त्रिषु ॥ २ ॥

ಕಾಕಲೀ ತು ಕಲೇ ಸೂಕ್ಷ್ಮೇ ಧ್ವನೌ ತು ಮಧುರಾಸ್ಫುಟೇ ।
ಕಲೋ ಮಂದ್ರಸ್ತು ಗಂಭೀರೇ ತಾರೋಽತ್ಯುಚ್ಚೈಸ್ತ್ರಯಸ್ತ್ರಿಷು ॥ ೨ ॥

समन्वितलयस्त्वेकतालो वीणा तु वल्लकी ।
विपञ्ची सा तु तन्त्रीभिः सप्तभिः परिवादिनी ॥ ३ ॥

ಸಮನ್ವಿತಲಯಸ್ತ್ವೇಕತಾಲೋ ವೀಣಾ ತು ವಲ್ಲಕೀ ।
ವಿಪಂಚೀ ಸಾ ತು ತಂತ್ರೀಭಿಃ ಸಪ್ತಭಿಃ ಪರಿವಾದಿನೀ ॥ ೩ ॥

ततं वीणादिकं वाद्यमानद्धं मुरजादिकम् ।
वंशादिकं तु सुषिरं कांस्यतालादिकं घनम् ॥ ४ ॥

ತತಂ ವೀಣಾದಿಕಂ ವಾದ್ಯಮಾನದ್ಧಂ ಮುರಜಾದಿಕಮ್ ।
ವಂಶಾದಿಕಂ ತು ಸುಷಿರಂ ಕಾಂಸ್ಯತಾಲಾದಿಕಂ ಘನಮ್ ॥ ೪ ॥

---

೨. ಅವ್ಯಕ್ತಾಕ್ಷರವುಳ್ಳುದಾಗಿಯೂ ಕಿವಿಗಿಂಪಾಗಿಯೂ ಇರುವ ಧ್ವನಿಗೆ (An inarticulate or indistinct, low and sweet tone) **कलः** ಎಂದೂ, ಆ **कल** ಎಂಬುದೇ ಸೂಕ್ಷ್ಮವಾಗಿದ್ದಲ್ಲಿ ಅದಕ್ಕೆ **काकली** ಎಂದೂ ಹೆಸರು (A low and sweet tone of a soft and minute nature). ಗಂಭೀರವಾದ ಧ್ವನಿಗೆ (Deep note) **मन्द्रः** ಎಂದೂ, ಬಹಳವಾಗಿ ಎತ್ತರಿಸಿರುವ ಧ್ವನಿಗೆ (A high tone, loud or shrill note) **तारः** ಎಂದೂ ಹೆಸರು, ಈ **कल**, **मन्द्र**, **तार** ಶಬ್ದಗಳು ಮೂರೂ, ಮೂರು ಲಿಂಗಗಳಲ್ಲಿಯೂ ಇರುವುವು.

೩. **एकतालः** ಎಂದರೆ ನೃತ್ತಗೀತ ವಾದ್ಯಗಳು ಏಕಕಾಲದಲ್ಲಿ ಲಯಹೊಂದುವಿಕೆ (Harmony or unison of song, dance and instrumental music). **वीणा, वल्लकी, विपञ्ची** ೩, ವೀಣೆಯ ಹೆಸರು (A lute or Veena). ಏಳು ತಂತಿಗಳ ವೀಣೆಗೆ (the same with seven strings) **परिवादिनी** ಎಂದು ಹೆಸರು.

चतुर्विधमिदं वाद्यवादित्रातोद्यनामकम् ।
मृदङ्गा मुरजा भेदास्त्वङ्क्यालिङ्ग्योर्ध्वकास्त्रयः ॥ ५ ॥

ಚತುರ್ವಿಧಮಿದಂ ವಾದ್ಯವಾದಿತ್ರಾತೋದ್ಯನಾಮಕಮ್ ।
ಮೃದಂಗಾ ಮುರಜಾ ಭೇದಾಸ್ತ್ವಂಕ್ಯಾಲಿಂಗ್ಯೋರ್ಧ್ವಕಾಸ್ತ್ರಯಃ ॥ ೫ ॥

स्याद्यशःपटहो ढक्का भेरी स्त्री दुन्दुभिः पुमान् ।
आनकः पटहोऽस्त्री स्यात्कोणो वीणादिवादनम् ॥६॥

ಸ್ಯಾದ್ಯಶಃಪಟಹೋ ಢಕ್ಕಾ ಭೇರೀ ಸ್ತ್ರೀ ದುಂದುಭಿಃ ಪುಮಾನ್ ।
ಆನಕಃ ಪಟಹೋಽಸ್ತ್ರೀ ಸ್ಯಾತ್ಕೋಣೋ ವೀಣಾದಿವಾದನಮ್ ॥ ೬ ॥

---

೪. ವೀಣೆ ಮುಂತಾದ ತಂತಿಯ ವಾದ್ಯಗಳಿಗೆ (Stringed instruments) **ततम्** ಎಂದು ಹೆಸರು. ಮೃದಂಗ ಮುಂತಾದ ಚರ್ಮವಾದ್ಯಗಳಿಗೆ (Drum-like instruments) **आनद्धम्** ಎಂದು ಹೆಸರು. ಕೊಳಲು ಮುಂತಾದ ಊದುವ ವಾದ್ಯಗಳಿಗೆ (Wind instruments) **सुषिरम्** ಎಂದು (**शुषिरम्** ಎಂದೂ ಸಹ) ಹೆಸರು. ತಾಳ, ಗೆಜ್ಜೆ, ಘಂಟೆ ಮುಂತಾದ ಕಂಚಿನ ವಾದ್ಯಕ್ಕೆ (Metallic instruments like Cymbals and bells) **घनम्** ಎಂದು ಹೆಸರು.

೫. **वाद्यम्, वादित्रम्, आतोद्यम्** ಈ ೩, ಮೇಲ್ಕಂಡ ನಾಲ್ಕು ವಿಧವಾದ ವಾದ್ಯಗಳಿಗೆ ಒಟ್ಟಿನ ಹೆಸರು (A collective term for the above four kinds of musical instruments; instrumental music). **मृदङ्गाः, मुरजाः** ಈ ೨, ಬಹುವಿಧವಾದ ಮೃದಂಗ ಅಥವಾ ಮದ್ದಳೆಗಳಿಗೆ ಸಾಮಾನ್ಯವಾದ ಹೆಸರು (Drums and tabors). ಇವುಗಳು ಬಹುವಿಧವಾದ್ದರಿಂದ ಎರಡು ಶಬ್ದಗಳೂ ಬಹುವಚನದಲ್ಲಿವೆ. **अङ्क्यः, आलिङ्ग्यः, ऊर्ध्वकः** ಈ ೩, ಮೃದಂಗದ ಭೇದಗಳು.

**वीणादण्डः प्रवालः स्यात्ककुभस्तु प्रसेवकः ।**
**कोलम्बकस्तु कायोऽस्या उपनाहो निबन्धनम् ॥ ७ ॥**

ವೀಣಾದಂಡಃ ಪ್ರವಾಲಃ ಸ್ಯಾತ್ಕಕುಭಸ್ತು ಪ್ರಸೇವಕಃ ।
ಕೋಲಂಬಕಸ್ತು ಕಾಯೋಽಸ್ಯಾ ಉಪನಾಹೋ ನಿಬಂಧನಮ್ ॥ ೭ ॥

**वाद्यप्रभेदा डमरुमड्डुडिण्डिमझर्झराः ।**
**मर्दलः पणवोऽन्ये च नर्तकीलासिके समे ॥ ८ ॥**

ವಾದ್ಯಪ್ರಭೇದಾ ಡಮರುಮಡ್ಡುಡಿಂಡಿಮಝರ್ಝರಾಃ ।
ಮರ್ದಲಃ ಪಣವೋಽನ್ಯೇ ಚ ನರ್ತಕೀ ಲಾಸಿಕೇ ಸಮೇ ॥ ೮ ॥

---

೬. **यशःपटहः, ढक्का** ಈ ೨, ಢವಣೀವಾದ್ಯದ ಹೆಸರು (A large drum or a double drum). **भेरी, दुन्दुभिः** ೨, ನಗಾರಿ (The great drum), **आनकः, पटहः** ೨, ತಮ್ಮಟೆ (A big kettle drum), ವೀಣೆ ಮೊದಲಾದ ವಾದ್ಯವನ್ನು ನುಡಿಸುವ ಸಾಧನ (A quill or bow).

೭. **प्रवालः** ಎಂದರೆ ವೀಣೆಯ ದಂಡಿಗೆಗೆ ಹೆಸರು (The neck of a lute). **ककुभः, प्रसेवकः** ಈ ೨ ವೀಣೆಯ ಹೆರಳಿಗೆ ಹೆಸರು (The sounding box or belly below the neck of a lute or a crooked piece of wood at the end of the lute). **कोलम्बकः** ಎಂದರೆ ವೀಣೆಯ ಶರೀರ (The body of the lute). **उपनाहः** ಎಂದರೆ ವೀಣೆಯ ತಂತಿ ಕಟ್ಟುವ ಬಾಯಿ ಮತ್ತು ಬಿರಡೆಗಳು, ಅಥವಾ ಅವಕ್ಕೆ ಕಟ್ಟಿರುವ ಬಿಗಿತ (The parts of a lute to which the strings are attached, or the tie).

೮. **डमरुः, मड्डुः, डिण्डिमः, झर्झरः, मर्दलः, पणवः** ಈ ೬, ಬುಡುಬುಡಿಕೆ, ಡಮರುಗ, ಝಲ್ಲರಿ, ಮದ್ದಳೆ, ಗೋಮುಖ,

**विलम्बितं द्रुतं मध्यं तत्त्वमोघो घनं क्रमात् ।**

**तालः कालक्रियामानं लयः साम्यमथास्त्रियाम् ॥९॥**

ವಿಲಂಬಿತಂ ದ್ರುತಂ ಮಧ್ಯಂ ತತ್ತ್ವಮೋಘೋ ಘನಂ ಕ್ರಮಾತ್ ।
ತಾಲಃ ಕಾಲಕ್ರಿಯಾಮಾನಂ ಲಯಃ ಸಾಮ್ಯಮಥಾಸ್ತ್ರಿಯಾಮ್ ॥ ೯ ॥

**ताण्डवं नटनं नाट्यं लास्यं नृत्यं च नर्तने ।**

**तौर्यत्रिकं नृत्यगीतवाद्यं नाट्यमिदं त्रयम् ॥ १० ॥**

ತಾಂಡವಂ ನಟನಂ ನಾಟ್ಯಂ ಲಾಸ್ಯಂ ನೃತ್ಯಂ ಚ ನರ್ತನಮ್ ।
ತೌರ್ಯತ್ರಿಕಂ ನೃತ್ಯಗೀತವಾದ್ಯಂ ನಾಟ್ಯಮಿದಂ ತ್ರಯಮ್ ॥ ೧೦ ॥

---

ಇವುಗಳಿಗೆ ಕ್ರಮವಾಗಿ ಒಂದೊಂದಕ್ಕೂ ಬೇರೆ ಬೇರೆ ಹೆಸರು (Names of the varieties of hand-drum).

ಕುಣಿಯುವ ಹೆಂಗಸಿಗೆ (A female dancer) **नर्तकी, लासिका** ಎಂದು ೨ ಹೆಸರುಗಳು.

೯. ಗಾಯನ, ನರ್ತನಗಳಲ್ಲಿ ವಿಲಂಬ (ಸಾವಕಾಶವಾದ), ದ್ರುತ (ತ್ವರೆಯಾದ), ಮಧ್ಯ (ಸ್ಥಾಯಿಯಾದ) ಗತಿಗಳಿಗೆ **तत्त्वम्, ओघः, घनम्** ಎಂದು ಕ್ರಮವಾಗಿ ಹೆಸರುಗಳು (Slow, quick and mean time in singing or dancing).

**तालः** ಎಂದರೆ ಕಾಲಕ್ಕೂ ಕ್ರಿಯೆಗೂ ಇರುವ ಒಂದು ಪರಿಮಿತಿಗೆ ಹೆಸರು (Beating time or musical time). **लयः** ಎಂದರೆ ತಾಳದ ಸಾಮ್ಯ ; ನೃತ್ತ, ಗೀತ, ವಾದ್ಯಗಳು ಒಟ್ಟುಗೂಡಿ, ಕಾಲದಲ್ಲಿ ಹೊಂದುವಿಕೆ ಅಥವಾ ಜಮಾವಣೆ (Equal time in music and dancing).

೧೦. **ताण्डवम्, नटनम्, नाट्यम्, लास्यम्, नृत्यम्, नर्तनम्** ಈ ೬, ಕುಣಿತಕ್ಕೆ ಹೆಸರು (Dancing). ಕುಣಿತ, ವಾದ್ಯ,

**भ्रकुंसश्च भ्रुकुंसश्च भ्रूकुंसश्चेति नर्तकः ।**
**स्त्रीवेषधारी पुरुषो नाट्योक्तौ गणिकाज्जुका ॥११॥**

ಭ್ರಕುಂಸಶ್ಚ ಭ್ರುಕುಂಸಶ್ಚ ಭ್ರೂಕುಂಸಶ್ಚೇತಿ ನರ್ತಕಃ ।
ಸ್ತ್ರೀವೇಷಧಾರೀ ಪುರುಷೋ ನಾಟ್ಯೋಕ್ತೌ ಗಣಿಕಾಜ್ಜುಕಾ ॥ ೧೧ ॥

**भगिनीपतिराबुत्तो भावो विद्वानथावुकः ।**
**जनको युवराजस्तु कुमारो भर्तृदारकः ॥ १२ ॥**

ಭಗಿನೀಪತಿರಾಬುತ್ತೋ ಭಾವೋ ವಿದ್ವಾನಥಾವುಕಃ ।
ಜನಕೋ ಯುವರಾಜಸ್ತು ಕುಮಾರೋ ಭರ್ತೃದಾರಕಃ ॥ ೧೨ ॥

---

ಹಾಡುಗಾರಿಕೆ, ಈ ಮೂರೂ ಕೂಡಿದ ನಾಟ್ಯಕ್ಕೆ (Dance accompanied with music and song) **तौर्यत्रिकम्** ಎಂದು ಹೆಸರು.

೧೧. **भ्रकुंसः, भ्रुकुंसः, भ्रूकुंसः** ಈ ೩ ಸ್ತ್ರೀ ವೇಷವನ್ನು ಧರಿಸಿ ಕುಣಿಯುವ ಗಂಡಸಿಗೆ ಹೆಸರು (Male dancer dressed as a female). ನಾಟ್ಯದಲ್ಲಿ ಸೂಳೆಗೆ (A courtesan) **अज्जुका** ಎಂದು ಹೆಸರು. ಈ ಹೆಸರೂ ಮತ್ತು ಇಲ್ಲಿಂದ ಮುಂದಕ್ಕೆ **अङ्गहारः** ಎಂಬ ಶಬ್ದದವರೆಗೆ ಹೇಳಿರುವ ಇತರ ಹೆಸರುಗಳೂ ಸಹ **नाट्योक्ति** ಯಲ್ಲಿ ಎಂದರೆ ನಾಟ್ಯಪ್ರಕರಣದಲ್ಲಿ ಮಾತ್ರ ಎಂದು ತಿಳಿಯಬೇಕು. (This and the following other terms up to the word 'Angahara' of Sloka No. 16, are used in the dramatic language only).

೧೨. ಒಡ ಹುಟ್ಟಿದವಳ ಗಂಡನಿಗೆ (A sister's husband) **आबुत्तः** ಎಂದೂ, ವಿದ್ವಾಂಸನಿಗೆ (A discreet or learned man) **भावः** ಎಂದೂ, ತಂದೆಗೆ (Father) **आवुकः** ಎಂದೂ, ರಾಜಪುತ್ರ ಅಥವಾ ಯುವರಾಜನಿಗೆ (A King's son or crown prince)

राजा भट्टारको देवस्तत्सुता भर्तृदारिका ।
देवी कृताभिषेकायामितरासु तु भट्टिनी ॥ १३ ॥

ರಾಜಾ ಭಟ್ಟಾರಕೋ ದೇವಸ್ತತ್ಸುತಾ ಭರ್ತೃದಾರಿಕಾ ।
ದೇವೀ ಕೃತಾಭಿಷೇಕಾಯಾಮಿತರಾಸು ತು ಭಟ್ಟಿನೀ ॥ ೧೩ ॥

अब्रह्मण्यमवध्योक्तौ राजश्यालस्तु राष्ट्रियः ।
अम्बा माताऽथ बाला स्याद्वासूरार्यस्तु मारिषः ॥१४॥

ಅಬ್ರಹ್ಮಣ್ಯಮವಧ್ಯೋಕ್ತೌ ರಾಜಶ್ಯಾಲಸ್ತು ರಾಷ್ಟ್ರಿಯಃ ।
ಅಂಬಾ ಮಾತಾಽಥ ಬಾಲಾ ಸ್ಯಾದ್ವಾಸೂರಾರ್ಯಸ್ತು ಮಾರಿಷಃ ॥ ೧೪ ॥

---

**कुमारः, भर्तृदारकः** ಎಂದೂ ಹೆಸರುಗಳು. ಹೀಗೆಯೇ ನಾಟಕದ ಪಾತ್ರಗಳ ಹೆಸರನ್ನು ಮುಂದಿನ ಶ್ಲೋಕವೂ ತಿಳಿಸುತ್ತದೆ.

೧೩. **भट्टारकः, देवः** ೨, ಅರಸು (King); **भर्तृदारिका**—ಅರಸನ ಮಗಳು (Princess); **देवी**—ಪಟ್ಟಾಭಿಷಿಕ್ತಳಾದ ರಾಣಿ (Crowned queen), **भट्टिनी**—ಪಟ್ಟಾಭಿಷಿಕ್ತಳಲ್ಲದ ರಾಣಿ (Any other wife of a king).

೧೪. [1] **अब्रह्मण्यम्** ಕೊಲ್ಲಕೂಡದೆಂಬ ಘೋಷಣೆ (An exclamation meaning sacrilegious act). **राष्ट्रियः** ರಾಜನ ಹೆಂಡತಿಯು ಒಡಹುಟ್ಟಿದವನು (King's brother-in-law). **अम्बा, माता** ೨, ತಾಯಿ (Mother). **बाला, वासूः** ೨, ಚಿಕ್ಕ ಹುಡುಗಿ; (A young girl) **आर्यः, मारिषः** ೨, ಪೂಜ್ಯನು (A worthy man).

---

1. **अब्रह्मण्यम् (न ब्रह्मणि साधु)** an unbrahmanical or sacrilegious act. The word is used as an exclamation meaning 'not to be killed!', 'refrain from killing!', or, 'help! a disgraceful deed is committed!'

**अत्तिका भगिनी ज्येष्ठा निष्ठानिर्वहणे समे ।**
**हण्डे हञ्जे हलाह्वानं नीचां चेटीं सखीं प्रति ॥ १५ ॥**

ಅತ್ತಿಕಾ ಭಗಿನೀ ಜ್ಯೇಷ್ಠಾ ನಿಷ್ಠಾ ನಿರ್ವಹಣೇ ಸಮೇ ।
ಹಂಡೇ ಹಂಜೇ ಹಲಾಹ್ವಾನಂ ನೀಚಾಂ ಚೇಟೀಂ ಸಖೀಂ ಪ್ರತಿ ॥ ೧೫ ॥

**अङ्गहारोऽङ्गविक्षेपो व्यञ्जकाभिनयौ समौ ।**
**निर्वृत्ते त्वङ्गसत्वाभ्यां द्वे त्रिष्वाङ्गिकसात्त्विके ॥ १६ ॥**

ಅಂಗಹಾರೋಽಂಗವಿಕ್ಷೇಪೋ ವ್ಯಂಜಕಾಭಿನಯೌ ಸಮೌ ।
ನಿರ್ವೃತ್ತೇ ತ್ವಂಗಸತ್ವಾಭ್ಯಾಂ ದ್ವೇ ತ್ರಿಷ್ವಾಂಗಿಕಸಾತ್ತ್ವಿಕೇ ॥ ೧೬ ॥

---

೧೫. **अत्तिका** ಎಂದರೆ ಅಕ್ಕ (Elder sister). **निष्ठा, निर्वहणम्** ೨, ನಾಟಕದ ಕಥೆಯ ಉಪಸಂಹಾರ (ಮುಗಿಸುವಿಕೆ) (The end of a play or the catastrophe of a drama as it is called). ಈ ಪದಗಳು ಸಮಾನಾರ್ಥಕಗಳಾದರೂ ಅವುಗಳ ಲಿಂಗಗಳು ಬೇರೆ ಬೇರೆ ಎಂಬುದನ್ನು ಅವುಗಳ ರೂಪಭೇದದಿಂದಲೇ ತಿಳಿಯಬಹುದು. **हण्डे, हञ्जे, हला** ಈ ೩, ಕ್ರಮವಾಗಿ ನೀಚಳನ್ನೂ, ಚೇಟಿಯನ್ನೂ, ಸಖಿಯನ್ನೂ ಕರೆಯುವ ಮಾತು (Appropriate terms of address for a low woman, a female slave and a female friend respectively). ಈ ೩ ಅವ್ಯಯಗಳು.

**अज्जुका** ಎಂದು ೧೧ನೆಯ ಶ್ಲೋಕದಲ್ಲಿ ಬರುವ ಪದದಿಂದ ಈ ಶ್ಲೋಕದ **हला** ಎಂಬ ಪದದವರೆಗೂ ಪೂರ್ತಿಯಾಗಿರುವ ಪದಗಳು, ನಾಟ್ಯಪ್ರಕರಣದಲ್ಲಿ ಮಾತ್ರ ಉಪಯೋಗಿಸುವ ಪದಗಳೆಂದು ಪುನಃ ಜ್ಞಾಪಿಸಿದೆ. ಆದರೂ **भावः, आर्यः, अम्बा** ಮುಂತಾದ ಕೆಲವು ಶಬ್ದಗಳು ಮಾತ್ರ ನಾಟ್ಯಪ್ರಕರಣವಲ್ಲದ ಸಾಮಾನ್ಯವಾದ ಮಾತುಗಳಲ್ಲಿಯೂ ಕೂಡ ಪ್ರಯೋಗದಲ್ಲಿದೆ ಎಂಬುದನ್ನು ತಿಳಿಯಬೇಕು.

೧೬ **अङ्गहारः, अङ्गविक्षेपः** ೨, ಕುಣಿಯುವಾಗ ಮೈಯನ್ನು

**श्रृङ्गारवीरकरुणाद्भुतहास्यभयानकाः ।**
**बीभत्सरौद्रौ च रसाः श्रृङ्गारः शुचिरुज्ज्वलः ॥ १७॥**

ಶೃಂಗಾರವೀರಕರುಣಾದ್ಭುತಹಾಸ್ಯಭಯಾನಕಾಃ ।
ಬೀಭತ್ಸರೌದ್ರೌ ಚ ರಸಾಃ ಶೃಂಗಾರಃ ಶುಚಿರುಜ್ಜ್ವಲಃ ॥ ೧೭ ॥

---

ಕುಲುಕಿಸುವಿಕೆ (Gestures made in dancing). **व्यञ्जकः, अभिनयः** ೨, ಕೈ ಮುಂತಾದವುಗಳಿಂದ ಮನಸ್ಸಿನ ಭಾವವನ್ನು ತೋರ್ಪಡಿಸುವುದು (Indication of thoughts and feelings by signs or gestures). **आङ्गिकम्** ಎಂದರೆ ಅಂಗಗಳಿಂದ ತಿಳಿಯ ಪಡಿಸುವಿಕೆ (Expressed by bodily action, attitude or gesture). **सात्त्विकम्** ಎಂದರೆ ಮನೋವೃತ್ತಿಯಿಂದ ಹುಟ್ಟುವ ಶರೀರ ಸ್ಥಿತಿ (A state of body caused by some natural emotion viz., perspiration, horripilation, tears, tremor etc.).

**आङ्गिक, सात्त्विक** ಶಬ್ದಗಳು ೩ ಲಿಂಗಗಳಲ್ಲಿಯೂ ಇರುತ್ತವೆ.

೧೭. **श्रृङ्गारः, वीरः, करुणः, अद्भुतः, हास्यः, भयानकः, बीभत्सः, रौद्रः** ಈ ಎಂಟಕ್ಕೂ[1] **रसाः** ಎಂದು ಹೆಸರು. ರಸವೇ ಕಾವ್ಯ ನಾಟಕಾದಿಗಳಲ್ಲಿರುವ ಸ್ವಾದು ಸ್ವರೂಪವಾದ ಮುಖ್ಯಾಂಶ (Taste or sentiment prevailing in poetry or drama or any work of art). ಒಂದೊಂದು ರಸದ ಹೆಸರನ್ನೂ ಅದರ ಪರ್ಯಾಯ ಪದಗಳಿಂದ ಮುಂದೆ ವಿವರಿಸಿದೆ.

**श्रृङ्गारः, शुचिः, उज्ज्वलः** ಈ ಮೂರು ಶೃಂಗಾರ ರಸಕ್ಕೆ ಹೆಸರು (Sentiment of love).

---

1. ಸಾಹಿತ್ಯ, ಸಂಗೀತ, ನಾಟ್ಯ ಕಲೆಗಳಲ್ಲಿ **रस**ವು ಅತ್ಯಂತ ಪ್ರಧಾನವಾದ ಅಂಶ; ಅದರಲ್ಲಿಯೂ ನಾಟ್ಯಕ್ಕೆ ಈ ರಸವೇ ಜೀವವು. ಆದುದರಿಂದ ಈ ನಾಟ್ಯವರ್ಗದ ವ್ಯಾಖ್ಯಾನದಲ್ಲಿ ರಸದ ಪ್ರಸ್ತಾವವನ್ನಾದರೂ ಸೂಕ್ಷ್ಮವಾಗಿ ಮಾಡಿ

ದಿಗ್ದರ್ಶನ ಮಾಡುವುದು ಆವಶ್ಯಕವೆಂದು, ಈ ಸಂಗ್ರಹವಾದ ಟಿಪ್ಪಣಿಯು ಬರೆಯಲ್ಪಟ್ಟಿದೆ.

**रस** ಶಬ್ದವು **रस-आस्वादनस्नेहनयोः** (To taste, to enjoy, to feel affection for) ಎಂಬ ಧಾತುವಿನಿಂದ ಹುಟ್ಟಿದುದು. (**रस्यन्ते इति रसाः** ಎಂದು). ಉತ್ತಮದರ್ಜೆಯ ಕಾವ್ಯ, ಸಂಗೀತ, ನಾಟ್ಯ ಮುಂತಾದ ಕಲೆಗಳು, ಅವನ್ನು ರಚಿಸುವವರ ಹೃದಯದಲ್ಲಿಯೂ ಮತ್ತು ಅವನ್ನು ಓದುವ, ಕೇಳುವ ಮತ್ತು ದೃಶ್ಯವಾದ ಶಿಲ್ಪನಾಟ್ಯಾದಿಗಳನ್ನು ನೋಡುವ ಸಹೃದಯರಾದ ಸಾಮಾಜಿಕರ ಹೃದಯದಲ್ಲಿಯೂ ಒಂದು ಲೋಕವಿಲಕ್ಷಣವಾದ ಅತ್ಯಂತ ಆನಂದವನ್ನುಂಟುಮಾಡುವುದು. ಅಂತಹ ಆನಂದಕ್ಕೆ ಕಾರಣವಾದುದೇ **रस** ಎನಿಸುವುದು. ಆ ರಸದ ಅನುಭವವೇ (**आनन्द**) ಆನಂದವು.

ಈ ರಸವು ಹುಟ್ಟಬೇಕಾದರೆ, ಸಹೃದಯರಾದ ವಾಚಕರ, ಶ್ರೋತೃಗಳ ಅಥವಾ ಪ್ರೇಕ್ಷಕರ ಮನಸ್ಸಿನಲ್ಲಿರುವ **स्थायिभाव** ಗಳು (elemental emotions) ಉದ್ಬುದ್ಧವಾಗಬೇಕು ಆ 'ಸ್ಥಾಯಿ' ಭಾವಗಳು ಯಾವುವೆಂದರೆ '**रतिर्हासश्च शोकश्च क्रोधोत्साहौ भयं तथा। जुगुप्सा विस्मयश्चेति स्थायिभावाः प्रकीर्तिताः**' ಎಂದು, **श्रृङ्गार, वीर** ಮುಂತಾದ ೮ ರಸಗಳಿಗೆ ಕ್ರಮವಾಗಿ **रति** (ಪ್ರೀತಿ), **उत्साह** ಮುಂತಾದ ೮ ಸ್ಥಾಯಿಭಾವಗಳು ಇರುತ್ತವೆ. **शम** (ಶಾಂತಿ) ಮತ್ತು **वात्सल्य** (ಮಕ್ಕಳಲ್ಲಿ ತಾಯಿತಂದೆಗಳಿಗೆ ಇರುವ ಪ್ರೇಮ), ಇವನ್ನೂ ಸೇರಿಸಿ ಕೆಲವರು ರಸಗಳ ಸಂಖ್ಯೆಯನ್ನು ೯ ಮತ್ತು ೧೦ ಎಂದೂ ಹೇಳುತ್ತಾರೆ. ಈ ಸ್ಥಾಯಿಭಾವಗಳು (Sustained emotional states) ಮನಸ್ಸಿನಲ್ಲಿ ಉದ್ಬುದ್ಧವಾಗಬೇಕಾದರೆ ಕೆಲವು ಕಾರಣಗಳೂ, ಅವುಗಳ ಕಾರ್ಯಗಳೂ ಇರಬೇಕು. ಚಿತ್ತವೃತ್ತಿಯ ಅಂತಹ ಕಾರಣ ಕಾರ್ಯಗಳಿಗೆ ಕ್ರಮವಾಗಿ **विभाव, अनुभाव** ಗಳೆಂದು ಹೆಸರು. (Causes and effects of emotion).

ನಾಟಕದಲ್ಲಿ ನಾಯಕನ ಚಿತ್ತವೃತ್ತಿಗೆ ನಾಯಿಕೆಯ ದರ್ಶನವು **विभाव** ವು (ಮನೋಭಾವಕ್ಕೆ ಕಾರಣವು, Cause of emotion). ಅದರ ಫಲವಾಗಿ ಉಂಟಾಗುವ ಶರೀರದ ವ್ಯಾಪಾರವು, ಎಂದರೆ ನಾಯಕನು ನಾಯಿಕೆಯನ್ನು ಕಂಡಾಗ ತೋರಿಸುವ ನಡೆನುಡಿಗಳು (External signs as effects of emotion) **अनुभाव** ಗಳೆನಿಸುವುವು. ಶರೀರದಲ್ಲಿ ಆಗ ಉಂಟಾಗುವ

ರೋಮಾಂಚ, ಕಂಪನ, ಸ್ವೇದ, ಗದ್ಗದ ಸ್ವರ ಮುಂತಾದುವೆಲ್ಲವೂ **अनुभाव**ಗಳು. ಇವಕ್ಕೆ ಸಹಕಾರಿ ಕಾರಣಗಳಾಗಿ ತಾತ್ಕಾಲಿಕವಾಗಿ ತೋರಿಬರುವ ಸಂತೋಷ, ಸಂಭ್ರಮ, ಉತ್ಸಾಹ, ಆತುರ, ಸಂದೇಹ, ಕಳವಳ, ಬೇಸರ, ಬಳಲಿಕೆ ಮುಂತಾದ ಅನೇಕ ಮನೋವಿಕಾರಗಳು (Transitory states of mind or body) **व्यभिचारिभाव** ಗಳೆನಿಸುವುವು. (ಅವು ಸ್ಥಾಯಿಗಳಾದ ರತಿ ಮುಂತಾದುವನ್ನು ತನುಮನಗಳಲ್ಲಿ ವಿಶೇಷವಾಗಿ ಸಂಚಾರಮಾಡಿಸುವುವು). ನಾಯಿಕೆಯೂ ಹೀಗೆಯೇ ನಾಯಕನ ದರ್ಶನದಿಂದ ಮನೋವಿಕಾರಗಳನ್ನು ಹೊಂದಿ ಅದಕ್ಕೆ ತಕ್ಕಹಾಗೆ ನಡೆನುಡಿಗಳನ್ನು ತೋರಿಸುವಳು. ಇವುಗಳ ಅಭಿನಯವನ್ನು ನೋಡುವ ಸಾಮಾಜಿಕರ ಮನಸ್ಸಿನಲ್ಲಿ '**रति**' ಸ್ಥಾಯಿಭಾವವು ಉದ್ಬುದ್ಧವಾಗಿ, ಅದು **शृङ्गार** ರಸವಾಗಿ ಪರಿಣಮಿಸಿ ಆನಂದಾನುಭವವುಂಟಾಗುವುದು. ಇಂತಹ ಆನಂದವೂ, ಇವಕ್ಕೆ ಕಾರಣವೂ ಆದುದೇ **रस** ಎನಿಸುವುದು. ಇದೇ ರೀತಿಯಾಗಿ ಉತ್ಸಾಹ, ಶೋಕ ಮುಂತಾದ ಸ್ಥಾಯಿಭಾವಗಳೂ ಕೂಡ, ಅವುಗಳಿಗೆ ಅನುಗುಣವಾದ ಕಾರಣ, ಕಾರ್ಯ ಮತ್ತು ಸಹಕಾರಿ ಕಾರ್ಯಕಾರಣಗಳಿಂದ (ವಿಭಾವ, ಅನುಭಾವ ಮತ್ತು ವ್ಯಭಿಚಾರಿಭಾವಗಳಿಂದ ಉದ್ಬುದ್ಧವಾಗಿ, ವೀರ, ಕರುಣ ಮುಂತಾದ ರಸಗಳೂ ಸಹ ಹುಟ್ಟುವುವು. ಅವುಗಳ ಅನುಭವವೂ ಸಹೃದಯರಿಗೆ ಆನಂದವುಂಟುಮಾಡುವುದು. ಇದೇ ರಸದ ತತ್ತ್ವವು.

ಇದನ್ನೇ ಭರತ ಮುನಿಗಳು '**विभावानुभावव्यभिचारिसंयोगाद्रस-निष्पत्तिः**' ಎಂದು ಸೂತ್ರ ರೂಪವಾಗಿ ತಿಳಿಸಿರುತ್ತಾರೆ. ಇದರ ಸೂಕ್ಷ್ಮವಿಚಾರಗಳನ್ನೂ ವಿಸ್ತಾರವಾದ ವಿಮರ್ಶೆಗಳನ್ನೂ ಪ್ರಾಚೀನ ಮತ್ತು ನವೀನ ಆಲಂಕಾರಿಕರೂ, ದಾರ್ಶನಿಕರೂ ಬಹಳವಾಗಿ ನಡೆಯಿಸಿ, ವೀರ, ಕರುಣ, ಅದ್ಭುತ, ಭಯಾನಕಾದಿ ರಸಗಳೂ ಕೂಡ ಆನಂದ ಪರಿಣಾಮಿಯಾಗಿ ಸಹೃದಯರಿಗೆ ಆನಂದ ಉಂಟುಮಾಡುವುದೆಂಬುದನ್ನು, ಆತ್ಮ ತತ್ತ್ವಕ್ಕೂ ಸಂಬಂಧಿಸಿ, ಸಮನ್ವಯಮಾಡಿ ತಿಳಿಸಿರುತ್ತಾರೆ. ರಸಾಸ್ವಾದವು ಆನಂದ ಸ್ವರೂಪವು; ರತಿ, ಹಾಸ, ಕರುಣ, ಅದ್ಭುತ ಮುಂತಾದ ಉಪಾಧಿಗಳೂ ಕೂಡ ತಮ್ಮ ವೈಯಕ್ತಿಕ ಗುಣಗಳನ್ನು ಬಿಟ್ಟು, ಸಾತ್ತ್ವಿಕವಾದ ಸುಖಸ್ವರೂಪವಾದ ಆನಂದದಲ್ಲಿ ಲೀನವಾಗಿಬಿಡುವುವು ಎಂದು ಅನೇಕ ಉದಾಹರಣೆಗಳಿಂದ ಭಟ್ಟನಾಯಕ, ಭೋಜ, ಅಭಿನವಗುಪ್ತ ಮುಂತಾದವರು ಸ್ವಾರಸ್ಯವಾಗಿ ಪ್ರತಿಪಾದಿಸಿರುತ್ತಾರೆ. ಇಂತಹ ರಸಾಸ್ವಾದ ಅಥವಾ ಆನಂದಾನುಭವ ಉಂಟಾಗಬೇಕಾದರೆ ಪ್ರೇಕ್ಷಕರು ಸಹೃದಯರಾಗಿರಬೇಕೆಂದು ಅಭಿನವಗುಪ್ತನೂ, ಪುಣ್ಯಶಾಲಿಯಾದ ರಸಿಕನಾಗಿರಬೇಕೆಂದು ಭೋಜನೂ ತಿಳಿಸಿರುತ್ತಾರೆ.

Since '*Rasa*' constitutes the essence of all art, a short explanatory note is considered desirable while commenting upon the names in the Natyavarga.

When we read good poetry, listen to good music, witness a good drama or see any excellent work of *art*, our elemental emotions (*Sthayibhavas*) are roused and nurtured; and we feel ourselves thrown into a state of rapture or *Ananda* which transcends the mundane reality. This is called *Rasa* or poetic sentiment which makes poetry or art enjoyable. Hence it is the *Taste* or character of a work of art and the prevailing feeling or sentiment in it, giving rise to that peculiar state of transcendental joy in the mind of the reader, listener or spectator, whatever be the theme of art—love or fury, pity or mirth. In the worldly reality *Ananda* is relative. It is contrasted with pain. Pain precedes and follows pleasure in the *Laukika* sphere; whereas in the *Alaukika* or idealised form, it is all pleasure and no pain, even the pain being transformed into pleasure or *Ananda* as a result of the *Bhavas* or emotions passing through the 'white heat of poetic imagination'.

Certain elemental emotions, called *Sthayibhavas* like love, laughter, pity etc., are roused by certain exciting causes and conditions named *Vibhavas* like the person or object of love, laughter or pity. The emotions so roused result in some kind of visible effects or external signs of the body called *Anubhavas*, like the talk and behaviour of the person who is moved by those emotions, which again are aided, amplified and further developed by *Vyabhicharibhavas*, viz., the numerous transitory states of mind or body, like yearning, cheer, shyness, misgiving, anxiety, fickleness, pride, painfulness, compassion etc. The net result is the manifestation of the *Sthayibhava* in its fully developed form—*Sringara*, *Hasya*, *Karuna* and so on, as the case may be, which constitutes the *Rasa* which is all pleasure or *Ananda*.

This *Ananda* is experienced both by the poet and the reader or spectator. Kinship of heart between the two is essential for the enjoyment of this 'Rasa-realisation'. *Rasika*, or *Sahridaya* is the name given to a person possessing such a heart which beats in unison with that of the poet.

उत्साहवर्धनो वीरः कारुण्यं करुणा घृणा ।
कृपा दयाऽनुकम्पा स्यादनुक्रोशोऽप्यथो हसः ॥ १८ ॥

ಉತ್ಸಾಹವರ್ಧನೋ ವೀರಃ ಕಾರುಣ್ಯಂ ಕರುಣಾ ಘೃಣಾ ।
ಕೃಪಾ ದಯಾಽನುಕಂಪಾ ಸ್ಯಾದನುಕ್ರೋಶೋಽಪ್ಯಥೋ ಹಸಃ ॥ ೧೮ ॥

हासो हास्यं च बीभत्सं विकृतं त्रिष्विदं द्वयम् ।
विस्मयोऽद्भुतमाश्चर्यं चित्रमप्यथ भैरवम् ॥ १९ ॥

ಹಾಸೋ ಹಾಸ್ಯಂ ಚ ಬೀಭತ್ಸಂ ವಿಕೃತಂ ತ್ರಿಷ್ವಿದಂ ದ್ವಯಮ್ ।
ವಿಸ್ಮಯೋಽದ್ಭುತಮಾಶ್ಚರ್ಯಂ ಚಿತ್ರಮಪ್ಯಥ ಭೈರವಮ್ ॥ ೧೯ ॥

दारुणं भीषणं भीष्मं घोरं भीमं भयानकम् ।
भयंकरं प्रतिभयं रौद्रं तूग्रममी त्रिषु ॥ २० ॥

ದಾರುಣಂ ಭೀಷಣಂ ಭೀಷ್ಮಂ ಘೋರಂ ಭೀಮಂ ಭಯಾನಕಮ್ ।
ಭಯಂಕರಂ ಪ್ರತಿಭಯಂ ರೌದ್ರಂ ತೂಗ್ರಮಮೀ ತ್ರಿಷು ॥ ೨೦ ॥

---

೧೮. **उत्साहवर्धनः, वीरः** ಈ ೨, ವೀರರಸಕ್ಕೆ ಹೆಸರು (Heroism). **कारुण्यम्, करुणा, घृणा, कृपा, दया, अनुकम्पा, अनुक्रोशः** ಈ ೭, ಕರುಣೆ ಅಥವಾ ದಯೆಗೆ ಹೆಸರು (Compassion or pathos).

೧೯. **हसः, हासः, हास्यम्** ಈ ೩, ಹಾಸ್ಯಕ್ಕೆ ಹೆಸರು (Mirth, laughter or derision). **बीभत्सम्, विकृतम्** ಈ ೨ ಭೀಭತ್ಸದ (ಅಸಹ್ಯವನ್ನುಂಟುಮಾಡುವುದರ) ಹೆಸರು (Disgust). ಈ ಎರಡೂ ತ್ರಿಲಿಂಗದಲ್ಲಿಯೂ ಇರುವುದು. ರಸದ ಹೆಸರಾದಾಗ ಮಾತ್ರ ಪುಲ್ಲಿಂಗ. **विस्मयः, अद्भुतम्, आश्चर्यम्, चित्रम्** ಈ ೪, ಆಶ್ಚರ್ಯಕ್ಕೆ ಹೆಸರು (Surprise).

೨೦. **भैरवम्, दारुणम्, भीषणम्, भीष्मम्, घोरम्,**

**चतुर्दश दरस्त्रासो भीतिर्भीः साध्वसं भयम् ।**
**विकारो मानसो भावोऽनुभावो भावबोधकः ॥ २१ ॥**

ಚತುರ್ದಶ ದರಸ್ತ್ರಾಸೋ ಭೀತಿರ್ಭೀಃ ಸಾಧ್ವಸಂ ಭಯಮ್ ।
ವಿಕಾರೋ ಮಾನಸೋ ಭಾವೋಽನುಭಾವೋ ಭಾವಬೋಧಕಃ ॥ ೨೧ ॥

**गर्वोऽभिमानोऽहंकारो मानश्चित्तसमुन्नतिः ।**
**(दर्पोऽवलेपोऽवष्टम्भश्चित्तोद्रेकः स्मयो मदः)**
**अनादरः परिभवः परीभावस्तिरस्क्रिया ॥ २२ ॥**

ಗರ್ವೋಽಭಿಮಾನೋಽಹಂಕಾರೋ ಮಾನಶ್ಚಿತ್ತಸಮುನ್ನತಿಃ ।
(ದರ್ಪೋಽವಲೇಪೋಽವಷ್ಟಮ್ಭಶ್ಚಿತ್ತೋದ್ರೇಕಃ ಸ್ಮಯೋ ಮದಃ ॥)
ಅನಾದರಃ ಪರಿಭವಃ ಪರೀಭಾವಸ್ತಿರಸ್ಕ್ರಿಯಾ ॥ ೨೨ ॥

---

**भीमम्, भयानकम्, भयंकरम्, प्रतिभयम्** ೯, ಭಯಾನಕವು (Terror, horror). **रौद्रम्, उग्रम्** ೨, ಉಗ್ರವು (Wrath).

**अद्भुत** ಶಬ್ದದಿಂದ ಪ್ರಾರಂಭವಾಗಿರುವ ಈ ೧೪ ಶಬ್ದಗಳು ರಸವನ್ನು ಮಾತ್ರ ತಿಳಿಸುವಾಗ ಪುಲ್ಲಿಂಗವಾಗಿಯೂ, ಆ ರಸವುಳ್ಳ ವಸ್ತು ಮುಂತಾದುವನ್ನು ತಿಳಿಸುವಾಗ ವಾಚ್ಯಲಿಂಗವಾಗಿಯೂ ಇರುತ್ತವೆ. **अद्भुतम्** ಎಂಬುದು ಅವ್ಯಯವೂ ಉಂಟು.

೨೧. **दरः, त्रासः, भीतिः, भीः, साध्वसम्, भयम्** ೬, ಭಯ (Fear). ಮನೋವಿಕಾರಕ್ಕೆ **भावः** ಎಂದು ಹೆಸರು (An emotional state). ಭಾವವನ್ನು ಬಾಹ್ಯವಾಗಿ ವ್ಯಕ್ತಪಡಿಸುವ ಮುಖವಿಕಾರ ಮುಂತಾದುದು **अनुभावः** ಎನಿಸುವುದು (Expression of an emotion by look or gesture).

೨೨-೨೩. **गर्वः, अभिमानः, अहङ्कारः** ೩, ಅಹಂಕಾರ (egotism or pride). ಆತ್ಮಗೌರವಕ್ಕೆ (Self-respect) **मानः** ಎಂದು ಹೆಸರು.

## रीढावमाननावज्ञावहेलनमसूक्षणम् ।
## मन्दाक्षं ह्रीस्त्रपा व्रीडा लज्जा साऽपत्रपाऽन्यतः ॥ २३ ॥

ರೀಢಾಽವಮಾನನಾಽವಜ್ಞಾವಹೇಲನಮಸೂಕ್ಷಣಮ್ ।
ಮಂದಾಕ್ಷಂ ಹ್ರೀಸ್ತ್ರಪಾ ವ್ರೀಡಾ ಲಜ್ಜಾ ಸಾಽಪತ್ರಪಾಽನ್ಯತಃ ॥ ೨೩ ॥

## क्षान्तिस्तितिक्षाऽभिध्या तु परस्य विषये स्पृहा ।
## अक्षान्तिरीर्ष्याऽसूया तु दोषारोपो गुणेष्वपि ॥ २४ ॥

ಕ್ಷಾಂತಿಸ್ತಿತಿಕ್ಷಾಽಭಿಧ್ಯಾ ತು ಪರಸ್ಯ ವಿಷಯೇ ಸ್ಪೃಹಾ ।
ಅಕ್ಷಾಂತಿರೀರ್ಷ್ಯಾಽಸೂಯಾ ತು ದೋಷಾರೋಪೋ ಗುಣೇಷ್ವಪಿ ॥ ೨೪ ॥

---

**दर्पः, अवलेपः, अवष्टम्भः, चित्तोद्रेकः, स्मयः, मदः** ೬, ಮದ (Arrogance). ಇದು ಹೆಚ್ಚಿಗೆಯ ಪರ್ಯಾಯ ಪದಗಳು.

**अनादरः, परिभवः, परीभावः, तिरस्क्रिया, रीढा, अवमानना, अवज्ञा, अवहेलनम्, असूक्षणम्** ೯, ಅನಾದರ ಅಥವಾ ತಿರಸ್ಕಾರ (Disrespect).

**मन्दाक्षम्, ह्रीः, त्रपा, व्रीडा, लज्जा** ೫, ನಾಚಿಕೆ (Modesty or shame). **अपत्रपा** ಎಂದರೆ ಇತರರ ದೆಸೆಯಿಂದ ಉಂಟಾದ ನಾಚಿಕೆ (Bashfulness).

೨೪. **क्षान्तिः, तितिक्षा** ೨, ಸೈರಣೆ (Forbearance, patience). **अभिध्या,** ಪರಸ್ವತ್ತಿನ ಆಶೆ (Covetousness). **अक्षान्तिः, ईर्ष्या** ೨, ಪರರ ಶ್ರೇಯಸ್ಸಿನಲ್ಲಿ ಅಸಹನೆ ಎಂದರೆ ಹೊಟ್ಟೆಕಿಚ್ಚು (Envy or impatience of another's success, jealousy). **असूया** ಎಂದರೆ ಪರರ ಗುಣದಲ್ಲಿ ದೋಷವನ್ನು ಆರೋಪಿಸುವಿಕೆ (Disparagement of the merits of others out of jealousy).

वैरं विरोधो विद्वेषो मन्युशोकौ तु शुक् स्त्रियाम् ।
पश्चात्तापोऽनुतापश्च विप्रतीसार इत्यपि ॥ २५ ॥

ವೈರಂ ವಿರೋಧೋ ವಿದ್ವೇಷೋ ಮನ್ಯುಶೋಕೌ ತು ಶುಕ್ ಸ್ತ್ರಿಯಾಮ್ ।
ಪಶ್ಚಾತ್ತಾಪೋಽನುತಾಪಶ್ಚ ವಿಪ್ರತೀಸಾರ ಇತ್ಯಪಿ ॥ ೨೫ ॥

कोपक्रोधामर्षरोषप्रतिघा रुट्क्रुधौ स्त्रियौ ।
शुचौ तु चरिते शीलमुन्मादश्चित्तविभ्रमः ॥ २६ ॥

ಕೋಪಕ್ರೋಧಾಮರ್ಷರೋಷಪ್ರತಿಘಾ ರುಟ್ಕ್ರುಧೌ ಸ್ತ್ರಿಯಾಮ್ ।
ಶುಚೌ ತು ಚರಿತೇ ಶೀಲಮುನ್ಮಾದಶ್ಚಿತ್ತವಿಭ್ರಮಃ ॥ ೨೬ ॥

प्रेमा ना प्रियता हार्दं प्रेम स्नेहोऽथ दोहदम् ।
इच्छा कांक्षा स्पृहेहा तृड्वाञ्छा लिप्सा मनोरथः ॥२७॥

ಪ್ರೇಮಾ ನಾ ಪ್ರಿಯತಾ ಹಾರ್ದಂ ಪ್ರೇಮ ಸ್ನೇಹೋಽಥ ದೋಹದಮ್ ।
ಇಚ್ಛಾ ಕಾಂಕ್ಷಾ ಸ್ಪೃಹೇಹಾ ತೃಡ್ವಾಂಛಾ ಲಿಪ್ಸಾ ಮನೋರಥಃ ॥ ೨೭ ॥

---

೨೫ **वैरम्, विरोधः, विद्वेषः** ೩, ಹಗೆತನ (Enmity or hatred). **मन्युः, शोकः, शुक्** ೩, ಶೋಕ (Grief). **शुक्** ಶಬ್ದವು ಚಾಂತವು.

**पश्चात्तापः, अनुतापः, विप्रतीसारः** ೩, ಪಶ್ಚಾತ್ತಾಪ (Repentance).

೨೬. **कोपः, क्रोधः, अमर्षः, रोषः, प्रतिघः, रुट्, क्रुध्** ೭, ಸಿಟ್ಟು (Wrath or rage). **रुट्** ಶಬ್ದವು ಷಾಂತವು; ಇದು ಮತ್ತು **क्रुध्** ಶಬ್ದಗಳು ಸ್ತ್ರೀಲಿಂಗಗಳು.

ಶುದ್ಧವಾದ ನಡತೆಗೆ (Good Conduct) **शीलम्** ಎಂದು ಹೆಸರು. **उन्मादः, चित्तविभ्रमः** ಈ ೨, ಹುಚ್ಚಿಗೆ ಹೆಸರು (Madness).

೨೭. **प्रेमा, प्रियता, हार्दम्, प्रेम, स्नेहः** ೫, ಸ್ನೇಹ

कामोऽभिलाषस्तर्षश्च सोऽत्यर्थं लालसा द्वयोः ।
उपाधिर्ना धर्मचिन्ता पुंस्याधिर्मानसी व्यथा ॥ २८ ॥

ಕಾಮೋಽಭಿಲಾಷಸ್ತರ್ಷಶ್ಚ ಸೋಽತ್ಯರ್ಥಂ ಲಾಲಸಾ ದ್ವಯೋಃ ।
ಉಪಾಧಿರ್ನಾ ಧರ್ಮಚಿಂತಾ ಪುಂಸ್ಯಾಧಿರ್ಮಾನಸೀ ವ್ಯಥಾ ॥ ೨೮ ॥

---

(Affection or friendship) **प्रेमा** ಎಂಬುದು ಪುಲ್ಲಿಂಗ ಶಬ್ದವು, ನಾನ್ತವು; **प्रेम** ಎಂಬುದು ನಪುಂಸಕಲಿಂಗ, **स्नेहः** ಎಂಬುದು ಪುಲ್ಲಿಂಗ, ಉಳಿದ ಎರಡು ಶಬ್ದಗಳ ಲಿಂಗಗಳನ್ನು ಅವುಗಳ ರೂಪಭೇದ ದಿಂದ ತಿಳಿದುಕೊಳ್ಳಬಹುದು.

೨೮. [1]**दोहदम्**, (**दोहदः** ಎಂದು ಪುಲ್ಲಿಂಗವೂ ಉಂಟು) **इच्छा, कांक्षा, स्पृहा, ईहा, तृट्, वाञ्छा, लिप्सा, मनोरथः, कामः, अभिलाषः, तर्षः** ೧೨, ಇಚ್ಛೆ, ಆಸೆ, ಕೋರಿಕೆ ಮುಂತಾದುದಕ್ಕೆ ಹೆಸರುಗಳು (Desire). **लालसा** ಎಂದರೆ ಅತಿಶಯವಾದ ಆಸೆ (Ardent desire). **लालसः** ಎಂದು ಪುಲ್ಲಿಂಗವೂ ಇದೆ.

**उपाधिः, धर्मचिन्ता** ೨, ಪುಣ್ಯದ ಯೋಚನೆ (Virtuous reflection). **उपाधि** ಶಬ್ದವು ಪುಲ್ಲಿಂಗ. ಮನಸ್ಸಿನ ವ್ಯಥೆಗೆ **आधिः** ಎಂದು ಹೆಸರು (Mental agony). ಈ ಶಬ್ದವು ಪುಲ್ಲಿಂಗ.

೨೯. **चिन्ता, स्मृतिः, आध्यानम्** ೩, ಸ್ಮರಿಸುವುದು, ನೆನೆಯುವುದು (Recollection; anxious thought). **उत्कण्ठा,**

---

1. **दोहद** ಶಬ್ದಕ್ಕೆ ಸಾಮಾನ್ಯವಾಗಿ ಆಸೆ ಎಂಬ ಅರ್ಥವಿದ್ದರೂ, ವಿಶೇಷವಾಗಿ ಗರ್ಭಿಣೀ ಸ್ತ್ರೀಯರ ಬಯಕೆ ಎಂಬ ಅರ್ಥದಲ್ಲಿ ಈ ಶಬ್ದವನ್ನು ಪ್ರಯೋಗಿಸುತ್ತಾರೆ. ಔಪಚಾರಿಕವಾಗಿ ಕೆಲವು ಗಿಡಗಳ ಬಯಕೆಗೂ ಈ ಶಬ್ದಪ್ರಯೋಗವುಂಟು. (The longing of a pregnant woman for particular objects is called *Dohada*. ‘It is said of plants also, figuratively, which at budding time long to be touched by the foot or by the mouth of a lovely woman’).

स्याच्चिन्ता स्मृतिराध्यानमुत्कण्ठोत्कलिके समे ।
उत्साहोऽध्यवसायः स्यात्स वीर्यमतिशक्तिभाक् ॥ २९ ॥

ಸ್ಯಾಚ್ಚಿಂತಾ ಸ್ಮೃತಿರಾಧ್ಯಾನಮುತ್ಕಂಠೋತ್ಕಲಿಕೇ ಸಮೇ |
ಉತ್ಸಾಹೋಽಧ್ಯವಸಾಯಃ ಸ್ಯಾತ್ಸ ವೀರ್ಯಮತಿಶಕ್ತಿಭಾಕ್ || ೨೯ ||

कपटोऽस्त्री व्याजदम्भोपधयश्छद्मकैतवे ।
कुसृतिर्निकृतिः शाठ्यं प्रमादोऽनवधानता ॥ ३० ॥

ಕಪಟೋಽಸ್ತ್ರೀ ವ್ಯಾಜದಂಭೋಪಧಯಶ್ಛದ್ಮಕೈತವೇ |
ಕುಸೃತಿರ್ನಿಕೃತಿಃ ಶಾಠ್ಯಂ ಪ್ರಮಾದೋಽನವಧಾನತಾ || ೩೦ ||

कौतूहलं कौतुकं च कुतुकं च कुतूहलम् ।
स्त्रीणां विलासविव्वोकविभ्रमा ललितं तथा ॥ ३१ ॥

ಕೌತೂಹಲಂ ಕೌತುಕಂ ಚ ಕುತುಕಂ ಚ ಕುತೂಹಲಮ್ |
ಸ್ತ್ರೀಣಾಂ ವಿಲಾಸವಿವ್ವೋಕವಿಭ್ರಮಾ ಲಲಿತಂ ತಥಾ || ೩೧ ||

---

**उत्कलिका** ೨, ಈಗಲೇ ಬೇಕೆಂಬ ಆಸೆ ಅಥವಾ ಆಸಕ್ತಿ (Impatient longing). **उत्साहः, अध्यवसायः** ೨, ಕಾರ್ಯಸಾಧನೆಗಾಗಿ ಮಾಡುವ ಪ್ರಯತ್ನ (Effort, perseverance). **वीर्यम्** ಎಂದರೆ ಬಹಳ ಶಕ್ತಿಯಿಂದ ಕೂಡಿದ ಉತ್ಸಾಹ (Fortitude or power).

೩೦. **कपटः, व्याजः, दम्भः, उपधिः, छद्म, कैतवम्, कुसृतिः, निकृतिः, शाठ्यम्** ೯, ಮೋಸ, ವಂಚನೆ (Hypocrisy or fraud). **प्रमादः, अनवधानता** ೨, ಜಾಗರೂಕತೆ ತಪ್ಪುವಿಕೆ (Inadvertency or blunder).

೩೧-೩೨. **कौतूहलम्, कौतुकम्, कुतुकम्, कुतूहलम्** ೪, ಕುತೂಹಲ (Eagerness or curiosity).

**विलासः, विव्वोकः, विभ्रमः, ललितम्, हेला, लीला**

हेला लीलेत्यमी हावाः क्रियाः शृङ्गारभावजाः ।
द्रवकेलिपरीहासाः क्रीडा लीला च नर्म च ॥ ३२ ॥

ಹೇಲಾ ಲೀಲೇತ್ಯಮೀ ಹಾವಾಃ ಕ್ರಿಯಾಃ ಶೃಂಗಾರಭಾವಜಾಃ ।
ದ್ರವಕೇಲಿಪರೀಹಾಸಾಃ ಕ್ರೀಡಾ ಲೀಲಾ ಚ ನರ್ಮ ಚ ॥ ೩೨ ॥

व्याजोऽपदेशो लक्ष्यं च क्रीडा खेला च कूर्दनम् ।
घर्मो निदाघः स्वेदः स्यात्प्रलयो नष्टचेष्टता ॥ ३३ ॥

ವ್ಯಾಜೋಽಪದೇಶೋ ಲಕ್ಷ್ಯಂ ಚ ಕ್ರೀಡಾ ಖೇಲಾ ಚ ಕೂರ್ದನಮ್ ।
ಘರ್ಮೋ ನಿದಾಘಃ ಸ್ವೇದಃ ಸ್ಯಾತ್ಪ್ರಲಯೋ ನಷ್ಟಚೇಷ್ಟತಾ ॥ ೩೩ ॥

अवहित्थाकारगुप्तिः समौ संवेगसंभ्रमौ ।
स्यादाच्छुरितकं हासः सोत्प्रासः स मनाक् स्मितम् ३४

ಅವಹಿತ್ಥಾಕಾರಗುಪ್ತಿಃ ಸಮೌ ಸಂವೇಗಸಂಭ್ರಮೌ ।
ಸ್ಯಾದಾಚ್ಛುರಿತಕಂ ಹಾಸಃ ಸೋತ್ಪ್ರಾಸಃ ಸ ಮನಾಕ್ ಸ್ಮಿತಮ್ ॥ ೩೪ ॥

---

೬, ಸ್ತ್ರೀಯರ ಶೃಂಗಾರಭಾವದ ಚೇಷ್ಟೆಗಳು (Dallience or coquetish behaviour). ಇದಕ್ಕೆ **हावाः** ಎಂದೂ ಹೆಸರು.

**द्रवः, केलिः, परीहासः, क्रीडा, लीला, नर्म** ೬, ಸ್ತ್ರೀಪುರುಷರ ಪ್ರೇಮದ ಆಟ (Amourous sport).

೩೩. **व्याजः, अपदेशः, लक्ष्यम्** ೩, ನೆವ (Pretence or disguise). **क्रीडा, खेला, कूर्दनम्** ೩, ಚಂಡು, ಬುಗುರಿ ಮುಂತಾದ ಆಟ (Play or game).

**घर्मः, निदाघः, स्वेदः** ೩, ಬೆವರು (Sweat). **प्रलयः, नष्टचेष्टता** ೨, ಸಿಟ್ಟು, ಸಂತೋಷ ಮುಂತಾದ ಮನಸ್ಸಿನ ವೇದನೆ ಹೆಚ್ಚಿ ಮೈಮರೆಯುವುದು (Fainting).

೩೪. **अवहित्था, आकारगुप्तिः** ೨, ಮನೋವೇದನೆಗಳಿಂದ

**मध्यमः स्याद्विहसितं रोमाञ्चो रोमहर्षणम् ।**
**क्रन्दितं रुदितं क्रुष्टं जृम्भस्तु त्रिषु जृम्भणम् ॥ ३५ ॥**

ಮಧ್ಯಮಃ ಸ್ಯಾದ್ವಿಹಸಿತಂ ರೋಮಾಂಚೋ ರೋಮಹರ್ಷಣಮ್ ||
ಕ್ರಂದಿತಂ ರುದಿತಂ ಕ್ರುಷ್ಟಂ ಜೃಂಭಸ್ತು ತ್ರಿಷು ಜೃಂಭಣಮ್ || ೩೫ ||

**विप्रलम्भो विसंवादो रिङ्गणं स्खलनं समे ।**
**स्यान्निद्रा शयनं स्वापः स्वप्नः संवेश इत्यपि ॥ ३६ ॥**

ವಿಪ್ರಲಂಭೋ ವಿಸಂವಾದೋ ರಿಂಗಣಂ ಸ್ಖಲನಂ ಸಮೇ |
ಸ್ಯಾನ್ನಿದ್ರಾ ಶಯನಂ ಸ್ವಾಪಃ ಸ್ವಪ್ನಃ ಸಂವೇಶ ಇತ್ಯಪಿ || ೩೬ ||

---

ಉಂಟಾದ ಶರೀರವಿಕಾರಗಳನ್ನು ಮರೆಮಾಚುವುದು (Dissimulation). **संवेगः, संभ्रमः** ೨, ಹರ್ಷಶೋಕಾದಿಗಳಿಂದ ಕೆಲಸದಲ್ಲಿ ತ್ವರೆಯನ್ನು ಅಥವಾ ಗಾಬರಿಯನ್ನು ತೋರಿಸುವುದು (Excitement or hurry due to joy or fear). ಮತ್ತೊಬ್ಬರನ್ನು ಹಂಗಿಸಿ ನಗುವುದಕ್ಕೆ (A hoarse laugh or derision) **आच्छुरितम्** ಎಂದೂ, ಮುಗುಳು ನಗೆ ಅಥವಾ ಕಿರುನಗೆಗೆ (Smile) **स्मितम्** ಎಂದೂ ಹೆಸರು.

೩೫. **विहसितम्** ಎಂದರೆ ಮಧ್ಯಸ್ತವಾದ ನಗು (Gentle laugh). **रोमाञ्चः, रोमहर्षणम्** ೨, ರೋಮಾಂಚವಾಗುವಿಕೆ (Horripilation). **क्रन्दितम्, रुदितम्, क्रुष्टम्** ೩, ಅಳುವುದು (Weeping). **जृम्भः, जृम्भणम्** ೨, ಆಕಳಿಕೆ (Yawning).

೩೬. **विप्रलम्भः, विसंवादः** ೨, ಕ್ರಮತಪ್ಪಿ ವ್ಯತ್ಯಸ್ತವಾಗಿ ನುಡಿಯುವುದು (Contradiction, disagreement or disappointment). **रिङ्गणम्, स्खलनम्** ೨, ನಡೆನುಡಿಗಳಲ್ಲಿ ಜಾರಿ ತಪ್ಪುವುದು (A slip or error in speech or conduct).

**निद्रा, शयनम्, स्वापः, स्वप्नः, संवेशः** ೫, ನಿದ್ರೆ (Sleep).

**तन्द्री प्रमीला भ्रकुटिः भ्रुकुटिर्भ्रूकुटिस्त्रियाम् ।**
**अदृष्टिः स्यादसौम्येऽक्षिण संसिद्धिप्रकृती त्विमे ॥ ३७ ॥**

ತಂದ್ರೀ ಪ್ರಮೀಲಾ ಭ್ರಕುಟಿಃ ಭ್ರುಕುಟಿರ್ಭ್ರೂಕುಟಿಸ್ತ್ರಿಯಾಮ್ ।
ಅದೃಷ್ಟಿಃ ಸ್ಯಾದಸೌಮ್ಯೇಽಕ್ಷ್ಣಿ ಸಂಸಿದ್ಧಿಪ್ರಕೃತೀ ತ್ವಿಮೇ ॥ ೩೭ ॥

**स्वरूपं च स्वभावश्च निसर्गश्चाथ वेपथुः ।**
**कम्पोऽथ क्षण उद्धर्षो मह उद्धव उत्सवः ॥ ३८ ॥**

**॥ इति नाट्यवर्गः ॥**

ಸ್ವರೂಪಂ ಚ ಸ್ವಭಾವಶ್ಚ ನಿಸರ್ಗಶ್ಚಾಥ ವೇಪಥುಃ ।
ಕಂಪೋಽಥ ಕ್ಷಣ ಉದ್ಧರ್ಷೋ ಮಹ ಉದ್ಧವ ಉತ್ಸವಃ ॥ ೩೮ ॥

॥ ಇತಿ ನಾಟ್ಯವರ್ಗಃ ॥

---

೩೭-೩೮. **तन्द्री, प्रमीला** ೨, ಆಯಾಸದಿಂದ ಉಂಟಾದ ನಿದ್ರೆಯ ಸ್ಥಿತಿ (Lassitude). **भ्रकुटिः, भ्रुकुटिः, भ्रूकुटिः** ೩, ಹುಬ್ಬು ಗಂಟು ಹಾಕುವುದು (Frown).

ಬಿರುನೋಟಕ್ಕೆ (A look of displeasure) **अदृष्टिः** ಎಂದು ಹೆಸರು. **संसिद्धिः, प्रकृतिः, स्वरूपम्, स्वभावः, निसर्गः** ಈ ೫, ಸ್ವಭಾವಕ್ಕೆ ಹೆಸರು (The natural state).

ನಡುಗುವುದಕ್ಕೆ (Trembling or a tremor) **वेपथुः, कम्पः** ಎಂದು ೨ ಹೆಸರುಗಳು.

**क्षणः, उद्धर्षः, महः, उद्धवः, उत्सवः** ಈ ೫, ಉತ್ಸವಕ್ಕೆ ಹೆಸರು (A festival or jubilee).

## ॥ अथ पातालभोगिवर्गः ॥

अधोभुवनपातालं बलिसद्म रसातलम् ।
नागलोकोऽथ कुहरं शुषिरं विवरं बिलम् ॥ १ ॥

॥ ಅಥ ಪಾತಾಲಭೋಗಿವರ್ಗಃ ॥

ಅಧೋಭುವನಪಾತಾಲಂ ಬಲಿಸದ್ಮ ರಸಾತಲಮ್ ।
ನಾಗಲೋಕೋಽಥ ಕುಹರಂ ಶುಷಿರಂ ವಿವರಂ ಬಿಲಮ್ ॥ ೧ ॥

छिद्रं निर्व्यथनं रोकं रन्ध्रं श्वभ्रं वपा शुषिः ।
गर्तावटौ भुवि श्वभ्रे सरन्ध्रे शुषिरं त्रिषु ॥ २ ॥

ಛಿದ್ರಂ ನಿರ್ವ್ಯಥನಂ ರೋಕಂ ರಂಧ್ರಂ ಶ್ವಭ್ರಂ ವಪಾ ಶುಷಿಃ ।
ಗರ್ತಾವಟೌ ಭುವಿ ಶ್ವಭ್ರೇ ಸರಂಧ್ರೇ ಶುಷಿರಂ ತ್ರಿಷು ॥ ೨ ॥

---

೧-೨. **अधोभुवनम्**, [1]**पातालम्**, **बलिसद्म**, **रसातलम्**, **नागलोकः** ೫, ಪಾತಾಳಕ್ಕೆ ಸಾಮಾನ್ಯವಾದ ಹೆಸರು (Each is a general name for the lower regions; the world of serpents or serpent-demons the sovereignty of which is said to belong to Bali. This is to be distinguished from Naraka, the place of punishment and torment).

**कुहरम्**, **शुषिरम्** (**सुषिरम्**), **विवरम्**, **बिलम्**, **छिद्रम्**,

---

1. **पाताल** ಲೋಕಗಳು **सप्तपाताल** ಗಳೆಂದು ಏಳು; ಅವು ಯಾವು ವೆಂದರೆ— **अतल, वितल, सुतल, रसातल, तलाऽतल, महातल, पाताल** ಗಳೆಂದು. ಅವುಗಳಲ್ಲಿ **पाताल** ವೆಂಬುದೂ ಒಂದು ಲೋಕವು; ಅದು ನಾಗಗಳೂ, ಸರ್ಪಗಳೂ ವಾಸಮಾಡುವ ಲೋಕವು. ಇದನ್ನೇ ನರಕಲೋಕವೆಂದು ಭಾವಿಸಬಾರದು. ಪಾತಾಲವೂ ನರಕವೂ ಬೇರೆಬೇರೆ ಎಂದು ತಿಳಿಯಬೇಕು.

**अन्धकारोऽस्त्रियां ध्वान्तं तमिस्रं तिमिरं तमः ।**
**ध्वान्ते गाढेऽन्धतमसं क्षीणेऽवतमसं तमः ॥ ३ ॥**

ಅಂಧಕಾರೋಽಸ್ತ್ರಿಯಾಂ ಧ್ವಾಂತಂ ತಮಿಸ್ರಂ ತಿಮಿರಂ ತಮಃ ।
ಧ್ವಾಂತೇ ಗಾಢೇಽಂಧತಮಸಂ ಕ್ಷೀಣೇಽವತಮಸಂ ತಮಃ ॥ ೩ ॥

**विष्वक्संतमसं नागाः काद्रवेयास्तदीश्वरः ।**
**शेषोऽनन्तो वासुकिस्तु सर्पराजोऽथ गोनसे ॥ ४ ॥**

ವಿಷ್ವಕ್ಸಂತಮಸಂ ನಾಗಾಃ ಕಾದ್ರವೇಯಾಸ್ತದೀಶ್ವರಃ ।
ಶೇಷೋಽನಂತೋ ವಾಸುಕಿಸ್ತು ಸರ್ಪರಾಜೋಽಥ ಗೋನಸೇ ॥ ೪ ॥

---

**निर्व्यथनम्, रोकम्, रन्ध्रम्, श्वभ्रम्, वपा, शुषिः (सुषिः)** ೧೧ ರಂಧ್ರ ಅಥವಾ ಬಿಲ (Hole).

**गर्तः, अवटः**, ೨, ನೆಲದಲ್ಲಿರುವ ಕಣಜ ಅಥವಾ ಹಗೇವಿಗೆ ಹೆಸರು (A vacuity in the ground). ರಂಧ್ರದಿಂದ ಕೂಡಿರುವುದಕ್ಕೆ (perforated) **शुषिरम्, (सुषिरम्)** ಎಂದೂ ಹೆಸರು; ಈ ಶಬ್ದವು ವಸ್ತುವಿಗೆ ವಿಶೇಷಣವಾದಾಗ ಮೂರು ಲಿಂಗಗಳಲ್ಲಿಯೂ ಇರುತ್ತದೆ.

೩-೪. **अन्धकारः, ध्वान्तम्, तमिस्रम्, तिमिरम्, तमः** ೫, ಕತ್ತಲೆಗೆ ಹೆಸರು (Darkness). **अन्धकार** ಶಬ್ದವು ಪುಲ್ಲಿಂಗವೂ ಮತ್ತು ನಪುಂಸಕವೂ ಆಗುವುದು.

ಕಗ್ಗತ್ತಲೆಗೆ (Thick darkness) **अन्धतमसम्** ಎಂದೂ, ಕಿರುಗತ್ತಲೆಗೆ (Slight darkness) **अवतमसम्** ಎಂದೂ ಹೆಸರು. ಇವು **अकारान्त** ನಪುಂಸಕ ಶಬ್ದಗಳು.

ಎಲ್ಲಕಡೆಯೂ ವ್ಯಾಪಿಸಿರುವ ಕತ್ತಲೆಗೆ (Universal darkness) **संतमसम्** ಎಂದು ಹೆಸರು. ಇದೂ **अकारान्त** ನಪುಂಸಕ ಶಬ್ದವು.

**नागाः, काद्रवेयाः** ೨, ನಾಗಲೋಕದ ಹಾವುಗಳು (The *Nagas* which are hooded snakes having a human

face with serpent–like lower extremities supposed to be inhabiting the *Patala* or the underworld).

ನಾಗಗಳ ಒಡೆಯನಾದ ಆದಿಶೇಷನಿಗೆ [1] **शेषः, अनन्तः** ಎಂದು ೨ ಹೆಸರುಗಳು (The Chief or King of the Nagas). [2] **वासुकिः, सर्पराजः** ಈ ೨ ಸರ್ಪಗಳಿಗೆ ರಾಜನಾದ ವಾಸುಕಿಗೆ ಹೆಸರು (The Chief or King of serpents).

[ ಸೂಚನೆ :— **शेष** ನಿಗೂ **वासुकि** ಗೂ ಈ ರೀತಿಯಾದ ಭೇದ ವಿದ್ದರೂ, ಕವಿಗಳು ಸರ್ಪರಾಜನಾದ ವಾಸುಕಿಯೂ, ನಾಗರಾಜನಾದ ಶೇಷನೂ ಇಬ್ಬರೂ ಒಂದೇ ಎಂಬುವ ಹಾಗೆ ಇವರ ಹೆಸರುಗಳನ್ನು ಪ್ರಯೋಗಿಸಿದ್ದಾರೆ. ಉದಾ :—ನಾಗಾನಂದ ನಾಟಕದಲ್ಲಿ "**नागराजेन वासुकिना गरुत्मानभिहितः**" ಎಂದು ಹೇಳಿದೆ.]

---

1-2. "*Sesha* is the name of a celebrated mythological thousand-headed serpent regarded as the emblem of eternity whence he is also called *Ananta*, the infinite. In the Vishnu-Purana he and the serpents, *Vasuki* and *Takshaka* are described as sons of *Kadru*, but in one place, *Sesha* alone is called King of the *Nagas* or snakes (with human face) inhabiting *Patala*, while elsewhere *Vasuki* also is described as king of the *Nagas*, and *Takshaka* of the serpents.

"The thousand-headed *Sesha* is sometimes represented as forming the Couch and Canopy of Vishnu while sleeping during the intervals of creation, sometimes as supporting the seven *Patalas* with the seven regions above them and therefore the entire world.

"*Vasuki* is (therefore) one of the three Chief Kings of the Nagas, the other two being Sesha and Takshaka. The gods and demons used the serpent Vasuki as a rope for twisting round the mountain Mandara when they churned the ocean"– '*Religious Thought and Life in India*' by Sir M. Monier Williams.

**तिलित्सः स्यादजगरे शयुर्वाहस इत्युभौ ।**
**अलगर्दो जलव्यालः समौ राजिलडुण्डुभौ ॥ ५ ॥**

ತಿಲಿತ್ಸಃ ಸ್ಯಾದಜಗರೇ ಶಯುರ್ವಾಹಸ ಇತ್ಯುಭೌ ।
ಅಲಗರ್ದೋ ಜಲವ್ಯಾಲಃ ಸಮೌ ರಾಜಿಲಡುಂಡುಭೌ ॥ ೫ ॥

**मालुधानो मातुलाहिर्निर्मुक्तो मुक्तकञ्चुकः ।**
**सर्पः पृदाकुर्भुजगो भुजङ्गोऽहिर्भुजंगमः ॥ ६ ॥**

ಮಾಲುಧಾನೋ ಮಾತುಲಾಹಿರ್ನಿರ್ಮುಕ್ತೋ ಮುಕ್ತಕಂಚುಕಃ ।
ಸರ್ಪಃ ಪೃದಾಕುರ್ಭುಜಗೋ ಭುಜಂಗೋಽಹಿರ್ಭುಜಂಗಮಃ ॥ ೬ ॥

---

೫. [1]**गोनसः (गोनासः), तिलित्सः** ೨, ಹೆಬ್ಬಾವು (Boa-constrictor). [2]**अजगरः, शयुः, वाहसः** ೩, ದಾಸರ ಹಾವು (A variety of Boa or a huge serpent). **अलगर्दः, जलव्यालः** ೨, ನೀರಿನಲ್ಲಿರುವ ಹಾವು (Water-snake). **राजिलः, डुण्डुभः** ಈ ೨, ಎರಡು ತಲೆ ಹಾವಿಗೆ ಹೆಸರು (A snake with two heads).

೬. **मालुधानः, मातुलाहिः** ೨, ಮಂಚದ ಕಾಲಿನ ಆಕಾರವುಳ್ಳ ಚಿತ್ರಚಿತ್ರವಾಗಿರುವ ಹಾವು. ಇದನ್ನು ಊಸರವಳ್ಳಿ ಹಾವು ಎಂದು

---

1. **गोनसः** ಎಂದರೆ **गोरिव नासा अस्य गोनसः** or **गोनासः** ಗೋವಿನಂತೆ ಮೂಗು ಉಳ್ಳದು (' Cow nose '). ಕೆಲವು ಹೆಬ್ಬಾವಿನ ಮೂಗು ಹೀಗೆಯೇ ಇರುವುದು.

2. **अजगरः** ಎಂಬ ಶಬ್ದವು **गृ-निगरणे** ಎಂಬ ಧಾತುವಿನಿಂದ ಹುಟ್ಟಿ, **अजस्य गरः = अजगरः** ಎಂದಾಗಿದೆ. ಆಡು, ಮೇಕೆ ಮುಂತಾದುದನ್ನು ನುಂಗುವುದು (Goat-swallower') ಎಂದೂ, ಅಥವಾ '**अजो (नित्यो) गरो (विषं) यस्य**'—**अजगरः** ಎಂದರೆ ಯಾವಾಗಲೂ ವಿಷವುಳ್ಳದು (Constantly having poison) ಎಂದೂ ವ್ಯಾಖ್ಯಾನಕಾರರು ಅರ್ಥ ಮಾಡಿರುತ್ತಾರೆ.

आशीविषो विषधरः चक्री व्यालः सरीसृपः ।
कुण्डली गूढपाच्चक्षुःश्रवाः काकोदरः फणी ॥ ७ ॥

ಆಶೀವಿಷೋ ವಿಷಧರಃ ಚಕ್ರೀ ವ್ಯಾಲಃ ಸರೀಸೃಪಃ ।
ಕುಂಡಲೀ ಗೂಢಪಾಚ್ಚಕ್ಷುಃಶ್ರವಾಃ ಕಾಕೋದರಃ ಫಣೀ ॥ ೭ ॥

दर्वीकरो दीर्घपृष्ठो दन्दशूको बिलेशयः ।
उरगः पन्नगो भोगी जिह्मगः पवनाशनः ॥ ८ ॥

ದರ್ವೀಕರೋ ದೀರ್ಘಪೃಷ್ಠೋ ದಂದಶೂಕೋ ಬಿಲೇಶಯಃ ।
ಉರಗಃ ಪನ್ನಗೋ ಭೋಗೀ ಜಿಹ್ಮಗಃ ಪವನಾಶನಃ ॥ ೮ ॥

---

ಕರೆಯುವರು (A kind of variegated snake). **निर्मुक्तः, मुक्तकञ्चुकः** ೨, ಪೊರೆಬಿಟ್ಟ ಹಾವು (A snake that has cast off its slough).

೭-೮. **सर्पः, पृदाकुः, भुजगः, भुजंगः, अहिः, भुजङ्गमः, आशीविषः, विषधरः, चक्री, व्यालः, सरीसृपः, कुण्डली, गूढपात्, चक्षुःश्रवाः, काकोदरः, फणी, दर्वीकरः, दीर्घपृष्ठः, दन्दशूकः, बिलेशयः, उरगः, पन्नगः, भोगी, जिह्मगः, पवनाशनः** ಈ ೨೫, ಹಾವಿಗೆ ಹೆಸರು (Snake).

ಮುಂದಿನ ಮೂರು ಪಙ್ಕ್ತಿಯ ಹೆಚ್ಚಿಗೆಯ ಪಾಠದಲ್ಲಿರುವ ಹೆಸರುಗಳು ಯಾವುವೆಂದರೆ—**लेलिहानः, द्विरसनः, गोकर्णः, कञ्चुकी, कुम्भीनसः, फणधरः, हरिः, भोगधरः** ಈ ೮ ಕೂಡ ಹಾವಿಗೇ ಹೆಸರುಗಳು (More names for the snake).

ಹಾವಿನ ಶರೀರಕ್ಕೆ (Body of the snake) **भोगः** ಎಂದೂ, ಅದರ ಹಲ್ಲಿಗೆ (A serpent's fang) **आशीः** ಎಂದೂ ಹೆಸರು.

(लेलिहानो द्विरसनो गोकर्णः कञ्चुकी तथा ।
कुम्भीनसः फणधरो हरिर्भोगधरस्तथा ॥
अहेः शरीरं भोगः स्यादाशीरप्यहिदंष्ट्रिका)
त्रिष्वाहेयं विषास्थ्यादि स्फटायां तु फणा द्वयोः ।
समौ कञ्चुकनिर्मोकौ क्ष्वेडस्तु गरलं विषम् ॥ ९ ॥

(ಲೇಲಿಹಾನೋ ದ್ವಿರಸನೋ ಗೋಕರ್ಣಃ ಕಂಚುಕೀ ತಥಾ ।
ಕುಂಭೀನಸಃ ಫಣಧರೋ ಹರಿರ್ಭೋಗಧರಸ್ತಥಾ ।
ಅಹೇಃ ಶರೀರಂ ಭೋಗಃ ಸ್ಯಾದಾಶೀರಪ್ಯಹಿದಂಷ್ಟ್ರಿಕಾ ।)
ತ್ರಿಷ್ವಾಹೇಯಂ ವಿಷಾಸ್ಥ್ಯಾದಿ ಸ್ಫಟಾಯಾಂ ತು ಫಣಾ ದ್ವಯೋಃ ।
ಸಮೌ ಕಂಚುಕನಿರ್ಮೋಕೌ ಕ್ಷ್ವೇಡಸ್ತು ಗರಲಂ ವಿಷಮ್ ॥ ೯ ॥

पुंसि क्लीबे च काकोलकालकूटहलाहलाः ।
सौराष्ट्रिकः शौक्लिकेयो ब्रह्मपुत्रः प्रदीपनः ॥ १० ॥

ಪುಂಸಿ ಕ್ಲೀಬೇ ಚ ಕಾಕೋಲಕಾಲಕೂಟಹಲಾಹಲಾಃ ।
ಸೌರಾಷ್ಟ್ರಿಕಃ ಶೌಕ್ಲಿಕೇಯೋ ಬ್ರಹ್ಮಪುತ್ರಃ ಪ್ರದೀಪನಃ ॥ ೧೦ ॥

---

೯. ಹಾವಿನ ವಿಷ, ಎಲುಬು, ಚರ್ಮ ಮುಂತಾದುದಕ್ಕೆ **आहेयम्** ಎಂದು ಒಂದೇ ಹೆಸರು **अहौ भवम्—आहेयम्** (Anything or any part of the body of the snake). ಇದು ಮೂರು ಲಿಂಗಗಳಲ್ಲಿಯೂ ಇರುವುದು. ಸ್ತ್ರೀಲಿಂಗದಲ್ಲಿ **आहेयी** ಎಂದಾಗುವುದು.

**स्फटा, फणा** ೨, ಹಾವಿನ ಹೆಡೆಗೆ ಹೆಸರು (Hood of a snake). ಈ ಎರಡು ಶಬ್ದಗಳಿಗೂ ಸ್ತ್ರೀಲಿಂಗ ಪುಲ್ಲಿಂಗಗಳೆರಡೂ ಉಂಟು.

**कञ्चुकः, निर्मोकः** ೨, ಹಾವಿನ ಪೊರೆಗೆ ಹೆಸರು (Slough of

**दारदो वत्सनाभश्च विषभेदा अमी नव ।**
**विषवैद्यो जाङ्गुलिको व्यालग्राह्यहितुण्डिकः ॥ ११ ॥**

**॥ इति पातालभोगिवर्गः ॥**

ದಾರದೋ ವತ್ಸನಾಭಶ್ಚ ವಿಷಭೇದಾ ಅಮೀ ನವ ।
ವಿಷವೈದ್ಯೋ ಜಾಂಗುಲಿಕೋ ವ್ಯಾಲಗ್ರಾಹ್ಯಹಿತುಂಡಿಕಃ ॥ ೧೧ ॥

॥ ಇತಿ ಪಾತಾಲಭೋಗಿವರ್ಗಃ ॥

---

a snake). **क्ष्वेडः, गरलम्, विषम्** ३, ವಿಷಸಾಮಾನ್ಯಕ್ಕೆ ಹೆಸರು (Poison). **विष** ಶಬ್ದವು ಪುಲ್ಲಿಂಗವೂ ಆಗುತ್ತದೆ ಎಂದು ಕೆಲವರು ಸೂಚಿಸಿದ್ದಾರೆ.

೧೦-೧೧. **काकोलः, कालकूटः, [1]हलाहलः, सौराष्ट्रिकः, शौक्लिकेयः, ब्रह्मपुत्रः, प्रदीपनः, दारदः, वत्सनाभः** ೯, ಒಂಭತ್ತು ಬಗೆಯ ವಿಷಗಳು (Nine kinds of poison). ಮೊದಲನೆಯ ೩ ಶಬ್ದಗಳು ನಪುಂಸಕಲಿಂಗಗಳೂ ಆಗುವುವು.

**विषवैद्यः, जाङ्गुलिकः** ೨, ವಿಷವನ್ನು ಇಳಿಸುವ ವೈದ್ಯನು (A doctor who prescribes antidotes for poison ; a toxicologist). **व्यालग्राही, अहितुण्डिकः** ೨, ಹಾವು ಹಿಡಿಯುವವನು (Snake charmer).

---

1. **हालाहलम्, हालहलम्** ಎಂಬ ವಿಕಲ್ಪರೂಪಗಳೂ ಉಂಟು

## ॥ अथ नरकवर्गः ॥

स्यान्नारकस्तु नरको निरयो दुर्गतिः स्त्रियाम् ।
तद्भेदास्तपनावीचिमहारौरवरौरवाः ॥ १ ॥

### ॥ ಅಥ ನರಕವರ್ಗಃ ॥

ಸ್ಯಾನ್ನಾರಕಸ್ತು ನರಕೋ ನಿರಯೋ ದುರ್ಗತಿಃ ಸ್ತ್ರಿಯಾಮ್ ।
ತದ್ಭೇದಾಸ್ತಪನಾವೀಚಿಮಹಾರೌರವರೌರವಾಃ ॥ ೧ ॥

संघातः कालसूत्रं चेत्याद्याः सत्त्वास्तु नारकाः ।
प्रेता वैतरणी सिन्धुः स्यादलक्ष्मीस्तु निर्ऋतिः ॥ २ ॥

ಸಂಘಾತಃ ಕಾಲಸೂತ್ರಂ ಚೇತ್ಯಾದ್ಯಾಃ ಸತ್ತ್ವಾಸ್ತು ನಾರಕಾಃ ।
ಪ್ರೇತಾ ವೈತರಣೀ ಸಿಂಧುಃ ಸ್ಯಾದಲಕ್ಷ್ಮೀಸ್ತು ನಿರ್ಋತಿಃ ॥ ೨ ॥

---

೧-೨. **नारकः, नरकः, निरयः, दुर्गतिः** ೪, ನರಕ (Hell).

**तपनः, अवीचिः, महारौरवः, रौरवः, संघातः, कालसूत्रम्** ಈ ೬, ನರಕದ ಆರು ಭೇದಗಳ ಹೆಸರು. 'ಇತ್ಯಾದ್ಯಾಃ' ಎಂದು ಹೇಳಿರುವುದರಿಂದ **कुम्भीपाक, तामिस्र** ಮುಂತಾದ ನರಕ ಭೇದಗಳೂ ಸೂಚಿತವಾಗುವುವು (Names of the various hells or places of pain and punishment).

**नारकाः, प्रेताः** ೨, ನರಕದಲ್ಲಿ ಯಾತನೆಯನ್ನು ಅನುಭವಿಸುತ್ತಿರುವ ಜೀವಗಳು (Departed spirits suffering in hell).

**निर्ऋतिः**, ಎಂದರೆ **(अलक्ष्मीः)** ನಿರ್ಭಾಗ್ಯತನ (Misfortune). **निर्ऋतिः** ಎಂಬುದು ಸ್ತ್ರೀಲಿಂಗ.

विष्टिराजूः कारणा तु यातना तीव्रवेदना ।
पीडा बाधा व्यथा दुःखमामनस्यं प्रसूतिजम् ॥ ३ ॥
स्यात्कष्टं कृच्छ्रमाभीलं त्रिष्वेषां भेद्यगामि यत् ।
॥ इति नरकवर्गः ॥

ವಿಷ್ಟಿರಾಜೂಃ ಕಾರಣಾ ತು ಯಾತನಾ ತೀವ್ರವೇದನಾ ।
ಪೀಡಾ ಬಾಧಾ ವ್ಯಥಾ ದುಃಖಮಾಮನಸ್ಯಂ ಪ್ರಸೂತಿಜಮ್ ॥ ೩ ॥
ಸ್ಯಾತ್ಕಷ್ಟಂ ಕೃಚ್ಛ್ರಮಾಭೀಲಂ ತ್ರಿಷ್ವೇಷಾಂ ಭೇದ್ಯಗಾಮಿ ಯತ್ ।
॥ ಇತಿ ನರಕವರ್ಗಃ ॥

---

೩. **विष्टिः, आजूः** ೨, ನರಕದಲ್ಲಿ ಕ್ಲೇಶಪಡಲು ಬಲಾತ್ಕಾರವಾಗಿ ತಳ್ಳುವಿಕೆ (Throwing into hell). ವೇತನವಿಲ್ಲದೆ ಬಲಾತ್ಕಾರವಾಗಿ ದುಡಿಯುವಿಕೆ (Forced labour without wages) ಎಂದೂ ಕೋಶಾಂತರದಲ್ಲಿ ಈ ಪದಗಳಿಗೆ ಅರ್ಥಮಾಡಿರುತ್ತಾರೆ.

**कारणा, यातना, तीव्रवेदना** ೩, ತೀವ್ರವಾದ ನರಕಯಾತನೆ (Agony). **पीडा, बाधा (आबाधा), व्यथा, दुःखम्, आमनस्यम्, प्रसूतिजम्, कष्टम्, कृच्छ्रम्, आभीलम्** ಈ ೯, ದುಃಖಕ್ಕೆ ಹೆಸರು (Sorrow or suffering).

ಈ ಪದಗಳಲ್ಲಿ **पीडा** ಮುಂತಾದ ಮೊದಲನೆಯ ೪ ಪದಗಳು ಮನಸ್ಸಿನ ಬಾಧೆಯನ್ನು (Mental pain), **आमनस्यम्**, ಎಂಬುದು ವೈಮನಸ್ಯವನ್ನೂ (Dejection), **प्रसूतिजम्** ಎಂದರೆ ಪ್ರಸವದುಃಖವೂ (Pain of birth), ಮುಂದಿನ ೩ ಪದಗಳು ಶರೀರದ ಯಾತನೆಯನ್ನೂ (Pain of the body) ತಿಳಿಸುತ್ತವೆ ಎಂದು ಕೆಲವರ ಅಭಿಪ್ರಾಯ. **दुःखम्** ಮುಂತಾದ ಶಬ್ದಗಳು 'ಭೇದ್ಯಗಾಮಿ' ಯಾದಲ್ಲಿ, ಎಂದರೆ ವಿಶೇಷ್ಯವನ್ನು ಹೊಂದಿದರೆ, ಆ ವಿಶೇಷ್ಯದ ಲಿಂಗವನ್ನೇ ಅನುಸರಿಸುವುದರಿಂದ, ಆ ಸಂದರ್ಭದಲ್ಲಿ ಮೂರು ಲಿಂಗಗಳೂ ಆಗುತ್ತವೆ. ಉದಾ:—'**सर्वं परवशं दुःखम्**'; **सेयं दुःखा दरिद्रता**'; '**दुःखः परगृहवासः**' ।

## ॥ अथ वारिवर्गः ॥

समुद्रोऽब्धिरकूपारः पारावारः सरित्पतिः ।
उदन्वानुदधिः सिन्धुः सरस्वान् सागरोऽर्णवः ॥ १ ॥

॥ ಅಥ ವಾರಿವರ್ಗಃ ॥

ಸಮುದ್ರೋಽಬ್ಧಿರಕೂಪಾರಃ ಪಾರಾವಾರಃ ಸರಿತ್ಪತಿಃ ।
ಉದನ್ವಾನುದಧಿಃ ಸಿಂಧುಃ ಸರಸ್ವಾನ್ ಸಾಗರೋಽರ್ಣವಃ ॥ ೧ ॥

रत्नाकरो जलनिधिर्यादःपतिरपांपतिः ।
तस्य प्रभेदाः क्षीरोदो लवणोदस्तथापरे ॥ २ ॥

ರತ್ನಾಕರೋ ಜಲನಿಧಿರ್ಯಾದಃಪತಿರಪಾಂಪತಿಃ ।
ತಸ್ಯ ಪ್ರಭೇದಾಃ ಕ್ಷೀರೋದೋ ಲವಣೋದಸ್ತಥಾಪರೇ ॥ ೨ ॥

---

೧-೨. **समुद्रः, अब्धिः, अकूपारः, पारावारः, सरित्पतिः, उदन्वान्, उदधिः, सिन्धुः, सरस्वान्, सागरः, अर्णवः, रत्नाकरः, जलनिधिः, यादःपतिः, अपांपतिः** ೧೫, ಸಮುದ್ರಕ್ಕೆ ಹೆಸರುಗಳು (The sea or ocean).

**क्षीरोदः** ಹಾಲಿನ ಕಡಲು (Sea of milk), **लवणोदः** (Sea of salt-water). ಹೀಗೆಯೇ ಇನ್ನೂ ಅನೇಕ ವಿಧವಾದ ಸಮುದ್ರಗಳು ಇವೆ ಎಂದು 'ತಥಾಪರೇ' ಎಂಬುದರಿಂದ ಸೂಚಿತವಾಗಿದೆ. ಅವು ಯಾವುವೆಂದರೆ **दध्युदः** ಮೊಸರಿನ ಕಡಲು (Sea of curds), **घृतोदः** ತುಪ್ಪದ ಕಡಲು (Sea of 'clarified butter'), **सुरोदः** ಮದ್ಯದ ಸಮುದ್ರ (Sea of wine), **इक्षूदः, स्वादूदः** ಸಿಹಿಯಾದ ರಸಗಳ ಸಮುದ್ರ (Sea of syrup), **जलोदः** ಸಿಹಿನೀರಿನ ಸಮುದ್ರ (Sea of fresh water).

**आपः स्त्री भूम्नि वार्वारि सलिलं कमलं जलम् ।**
**पयः कीलालममृतं जीवनं भुवनं वनम् ॥ ३ ॥**

ಆಪಃ ಸ್ತ್ರೀ ಭೂಮ್ನಿ ವಾರ್ವಾರಿ ಸಲಿಲಂ ಕಮಲಂ ಜಲಮ್ ।
ಪಯಃ ಕೀಲಾಲಮಮೃತಂ ಜೀವನಂ ಭುವನಂ ವನಮ್ ॥ ೩ ॥

**कबन्धमुदकं पाथः पुष्करं सर्वतोमुखम् ।**
**अम्भोऽर्णस्तोयपानीयनीरक्षीराम्बुशम्बरम् ॥ ४ ॥**

ಕಬಂಧಮುದಕಂ ಪಾಥಃ ಪುಷ್ಕರಂ ಸರ್ವತೋಮುಖಮ್ ।
ಅಂಭೋಽರ್ಣಸ್ತೋಯಪಾನೀಯನೀರಕ್ಷೀರಾಂಬುಶಂಬರಮ್ ॥ ೪ ॥

---

೩-೪. **आपः, [1]वाः, वारि, सलिलम्, कमलम्, जलम्, पयः, कीलालम्, अमृतम्, जीवनम्, भुवनम्, वनम्, कबन्धम्, उदकम्, पाथः, पुष्करम्, सर्वतोमुखम्, अम्भः, अर्णः, तोयम्, पानीयम्, नीरम्, क्षीरम्, अम्बु, शम्बरम्, मेघपुष्पम्, घनरसः** ಈ ೨೭, ನೀರಿನ ಹೆಸರುಗಳು (Water).

'**आपः**' ಎಂಬುದು ಸ್ತ್ರೀಲಿಂಗ ಮತ್ತು ನಿತ್ಯಬಹುವಚನ. [1]'**वाः**' ಎಂಬುದು ರೇಫಾಂತ ಶಬ್ದವು; ಇದಕ್ಕೆ ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಗಳೆರಡೂ ಇವೆ. '**घनरसः**' ಎಂಬುದು ಪುಲ್ಲಿಂಗವು, ಮತ್ತು ನಪುಂಸಕ

---

1. **वाः** ಎಂಬುದು **वार्** ಎಂಬ ರೇಫಾಂತ ಶಬ್ದ. ಇದು ಅದರ ಹಿಂದಿನ **आपः** ಎಂಬ ಸ್ತ್ರೀಲಿಂಗ ಶಬ್ದಕ್ಕೂ ಮುಂದಿನ **वारि** ಎಂಬ ನಪುಂಸಕ ಶಬ್ದಕ್ಕೂ ನಡುವೆ ಇರುವುದರಿಂದ '**साहचर्याच्च कुत्रचित्**' ಎಂಬ ಪರಿಭಾಷೆಯ ಪ್ರಕಾರ, **वार्** ಶಬ್ದವು ಸ್ತ್ರೀಲಿಂಗವೂ ಮತ್ತು ನಪುಂಸಕಲಿಂಗವೂ ಸಹ ಆಗುತ್ತದೆ.

**वाः वारौ वारः, वारम् वारौ वारः, वारा वार्भ्याम् वार्भिः,** ಇತ್ಯಾದಿ ರೀತಿಯಾಗಿ ಸ್ತ್ರೀಲಿಂಗದಲ್ಲಿಯೂ, **वाः वारी वारि, वाः वारी वारि, वारा वार्भ्याम् वार्भिः**—ಇತ್ಯಾದಿ ರೀತಿಯಾಗಿ ನಪುಂಸಕದಲ್ಲಿಯೂ ಶಬ್ದಗಳನ್ನು ಹೇಳಬೇಕು.

**मेघपुष्पं घनरसः त्रिषु द्वे आप्यमम्मयम् ।**
**भङ्गस्तरङ्ग ऊर्मिर्वा स्त्रियां वीचिरथोर्मिषु ॥ ५ ॥**

ಮೇಘಪುಷ್ಪಂ ಘನರಸಃ ತ್ರಿಷು ದ್ವೇ ಆಪ್ಯಮಮ್ಮಯಮ್ ।
ಭಂಗಸ್ತರಂಗ ಊರ್ಮಿರ್ವಾ ಸ್ತ್ರಿಯಾಂ ವೀಚಿರಥೋರ್ಮಿಷು ॥ ೫ ॥

**महत्सूल्लोलकल्लोलौ स्यादावर्तोऽम्भसां भ्रमः ।**
**पृषन्ति बिन्दुपृषताः पुमांसो विप्रुषः स्त्रियाम् ॥ ६ ॥**

ಮಹತ್ಸೂಲ್ಲೋಲಕಲ್ಲೋಲೌ ಸ್ಯಾದಾವರ್ತೋಽಂಭಸಾಂ ಭ್ರಮಃ ।
ಪೃಷಂತಿ ಬಿಂದುಪೃಷತಾಃ ಪುಮಾಂಸೋ ವಿಪ್ರುಷಃ ಸ್ತ್ರಿಯಾಮ್ ॥ ೬ ॥

---

ಲಿಂಗವೂ ಕೂಡ ಆಗುವುದೆಂದು 'ರತ್ನಕೋಶ'ವು ಹೇಳುತ್ತದೆ. ಉಳಿದ ಶಬ್ದಗಳೆಲ್ಲವೂ ನಪುಂಸಕಲಿಂಗಗಳು.

ನೀರಿನ ವಿಕಾರ ಅಥವಾ ನೀರಿನಮಯವಾದುದು ಎಂಬುದಕ್ಕೆ (watery) **आप्यम्, अम्मयम्** ಎಂದು ೨ ಹೆಸರುಗಳು. ಈ ಶಬ್ದಗಳು ಮೂರು ಲಿಂಗಗಳಲ್ಲಿಯೂ ಉಂಟು.

**भङ्गः, तरङ्गः, ऊर्मिः, वीचिः** ಈ ೪, ಅಲೆಗಳ ಹೆಸರು (waves). **ऊर्मि** ಶಬ್ದವು ಪುಲ್ಲಿಂಗ ಮತ್ತು ಸ್ತ್ರೀಲಿಂಗ. **वीचि** ಶಬ್ದವು ಸ್ತ್ರೀಲಿಂಗ.

೬. **उल्लोलः, कल्लोलः** ೨, ದೊಡ್ಡ ಅಲೆಗಳಿಗೆ ಹೆಸರು (High waves). ನೀರಿನ ಸುಳಿಗೆ (A whirl-pool) **आवर्तः** ಎಂದು ಹೆಸರು. **पृषन्ति, बिन्दवः, पृषतः, विप्रुषः** ಈ ೪, (ಬಹುವಚನ ರೂಪಗಳು) ಜಲಬಿಂದುಗಳಿಗೆ ಹೆಸರು (Drops of water). **पृषत्** ಶಬ್ದವು ನಪುಂಸಕಲಿಂಗವು; **विप्रुट्** ಶಬ್ದವು ಸ್ತ್ರೀಲಿಂಗವು; **बिन्दु** ಶಬ್ದವು ಮತ್ತು ಅದರ ಮುಂದಿನ **पृषत्** ಶಬ್ದವೂ ಪುಲ್ಲಿಂಗಗಳು.

चक्राणि पुटभेदाः स्युर्भ्रमाश्च जलनिर्गमाः ।
कूलं रोधश्च तीरं च प्रतीरं च तटं त्रिषु ॥ ७ ॥

ಚಕ್ರಾಣಿ ಪುಟಭೇದಾಃ ಸ್ಯುರ್ಭ್ರಮಾಶ್ಚ ಜಲನಿರ್ಗಮಾಃ |
ಕೂಲಂ ರೋಧಶ್ಚ ತೀರಂ ಚ ಪ್ರತೀರಂ ಚ ತಟಂ ತ್ರಿಷು || ೭ ||

पारावारे परार्वाची तीरे पात्रं तदन्तरम् ।
द्वीपोऽस्त्रियामन्तरीपं यदन्तर्वारिणस्तटम् ॥ ८ ॥

ಪಾರಾವಾರೇ ಪರಾರ್ವಾಚೀ ತೀರೇ ಪಾತ್ರಂ ತದಂತರಮ್ |
ದ್ವೀಪೋಽಸ್ತ್ರಿಯಾಮಂತರೀಪಂ ಯದಂತರ್ವಾರಿಣಸ್ತಟಮ್ || ೮ ||

---

೭. **चक्राणि (वक्राणि), पुटभेदाः** ೨, ಚಕ್ರಾಕಾರವಾಗಿ ಹರಿಯುವ ಹೊಳೆ, ಅಥವಾ ಪ್ರವಾಹಗಳ ಕುಟಿಲಗತಿ (A winding stream). **भ्रमाः, जलनिर्गमाः** ೨, ನೀರು ಹರಿಯುವ ತೂಬು, ಮೋಹರಿ, ಬಚ್ಚಲು ಮುಂತಾದುದು (A drain or water course).

**कूलम्, रोधः, तीरम्, प्रतीरम्, तटम्** ೫, ದಡಕ್ಕೆ ಹೆಸರು (Shore or bank). **रोधः** ಎಂಬುದು ಸಾಂತವು, ಮತ್ತು ಅಕಾರಾಂತವೂ ಆಗುವುದು. **तट** ಶಬ್ದವು ಮೂರು ಲಿಂಗಗಳಲ್ಲಿಯೂ ಉಂಟು.

೮. [1] **पारावारे** ಎಂದರೆ (**परावाची तीरे—परं च अर्वाक् च तीरे**) ನೀರಿನ ಆಚೆ ಈಚೆಯ ದಡಗಳು (The two opposite

---

1. **पारावारः** ಎಂದು ಪುಲ್ಲಿಂಗಶಬ್ದವಾದರೆ ಸಮುದ್ರವೆಂದೂ, **पारा-वारम्** ಎಂದು ನಪುಂಸಕವಾದರೆ ನೀರಿನ ದಡಗಳೆರಡೂ ಎಂದೂ ತಿಳಿಯಬೇಕು. "**पारावारः पयोराशौ, पारावारं तटद्वये**" ಎಂಬುದನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಬಹುದು. **पारावार** ಶಬ್ದಕ್ಕೆ ಸಮುದ್ರವೆಂದು ಅರ್ಥಮಾಡುವಾಗ **पारं आवृणोति, वृञ् वरणे** ಎಂಬ ಧಾತುವಿನಿಂದ ಹುಟ್ಟಿದ ಪುಲ್ಲಿಂಗ ಶಬ್ದವೆಂದು ತಿಳಿಯಬೇಕು; ಎರಡು ದಡಗಳೆಂದು ಅರ್ಥ ಹೇಳುವಾಗ **परं तीरम्-पारम्, अर्वाक् तीरम्-अवारम्, पारं च अवारं च-'पारावारे'** ಎಂದು ನಪುಂಸಕ ಶಬ್ದದ ಪ್ರಥಮಾ ದ್ವಿವಚನವೆಂಬುದು ಗಮನಾರ್ಹವು.

**तोयोत्थितं तत्पुलिनं सैकतं सिकतामयम् ।**
**निषद्वरस्तु जम्बालः पङ्कोऽस्त्री शादकर्दमौ ॥ ९ ॥**

ತೋಯೋತ್ಥಿತಂ ತತ್ಪುಲಿನಂ ಸೈಕತಂ ಸಿಕತಾಮಯಮ್ ।
ನಿಷದ್ವರಸ್ತು ಜಂಬಾಲಃ ಪಂಕೋಽಸ್ತ್ರೀ ಶಾದಕರ್ದಮೌ ॥ ೯ ॥

---

banks; the further and the near shore). ಇದು **पारावारम्** ಎಂಬ ನಪುಂಸಕ ಶಬ್ದದ ದ್ವಿವಚನ ರೂಪ. **पारम्** ಎಂದರೆ ಆಚೆಯ ದಡ (The further bank); **अवारम्** ಎಂದರೆ ಈಚೆಯ ದಡ (The near bank). **पात्रम्** ಎಂದರೆ (**तदन्तरम्—पार अवार** ಗಳ ಮಧ್ಯೆ ಇರುವ) ಆಚೆ ಈಚೆ ದಡಗಳ ನಡುವೆ ನೀರು ಇರುವ ಅಥವಾ ಹರಿಯುವ ಸ್ಥಳ (The bed of the stream).

[1] **द्वीपः, अन्तरीपम्** ೨, ನೀರಿನ ಮಧ್ಯೆ ಇರುವ ಭೂಪ್ರದೇಶ, ದ್ವೀಪವೆಂದೇ ಕನ್ನಡದಲ್ಲಿಯೂ ಹೆಸರು (An island). 'ಅಸ್ತ್ರಿಯಾಮ್' ಎಂದು ನಡುವೆ ಹೇಳಿರುವುದರಿಂದ ಈ ಎರಡು ಶಬ್ದಗಳಿಗೂ ಸ್ತ್ರೀಲಿಂಗ ಮಾತ್ರ ಇರುವುದಿಲ್ಲ, ಪುಲ್ಲಿಂಗ ನಪುಂಸಕಲಿಂಗಗಳು ಮಾತ್ರ ಉಂಟೆಂದು ತಾತ್ಪರ್ಯ. ಆದುದರಿಂದ **द्वीपम्** ಎಂದು ನಪುಂಸಕವೂ, **अन्तरीपः** ಎಂದು ಪುಲ್ಲಿಂಗವೂ ಇದೆ.

೯. **पुलिनम्** ಎಂದರೆ (**तोयोत्थितम्**—ನೀರಿನಿಂದ ಮೇಲಕ್ಕೆ ಎದ್ದಿರುವುದು) ನೀರು ಹೋದನಂತರ ಕಂಡುಬರುವ ಭೂಮಿ ಅಥವಾ ದಿಣ್ಣೆ (An islet, a sandy beach or alluvial ground)

---

1. **यत् अन्तर्वारिणः तटम्**—(ಯಾವುದು ನೀರಿನ ಮಧ್ಯೆ ಇರುವ ದಡ ಅಥವಾ ದಿಣ್ಣೆಯೋ) ಅದು **द्वीपः, अन्तरीपम्** ಎಂದೆನಿಸಿಕೊಳ್ಳುತ್ತದೆ ಎಂದು ಈ ಎರಡು ಶಬ್ದಗಳ ಸುಲಭವಾದ ಅರ್ಥವಿವರಣೆಯು ಮೂಲ ಪಙ್ಕ್ತಿಯಲ್ಲಿಯೇ ಇದೆ. ಇವುಗಳ ಅವಯವಾರ್ಥವೂ ಸಹ ಹೀಗಿರುವುದು—**द्विर्गताः** ಅಥವಾ **द्विधा गताः आपः अत्र—द्वीपम्; अन्तः अपां-अन्तरीपम्।**

**जलोच्छ्वासाः परीवाहाः कूपकास्तु विदारकाः ।**
**नाव्यं त्रिलिङ्गं नौतार्ये स्त्रियां नौस्तरणिस्तरिः॥ १० ॥**

ಜಲೋಚ್ಛ್ವಾಸಾಃ ಪರೀವಾಹಾಃ ಕೂಪಕಾಸ್ತು ವಿದಾರಕಾಃ ।
ನಾವ್ಯಂ ತ್ರಿಲಿಂಗಂ ನೌತಾರ್ಯೇ ಸ್ತ್ರಿಯಾಂ ನೌಸ್ತರಣಿಸ್ತರಿಃ ॥ ೧೦ ॥

**सैकतम्, सिकतामयम्** ನ, ಮರಳಿನ ದಿಣ್ಣೆ (A sand bank).

**निषद्वरः, जम्बालः, पङ्कः, शादः, कर्दमः** ಪು, ಕೆಸರು (Mud, mire or clay). **पङ्क** ಶಬ್ದವು 'ಅಸ್ತ್ರೀ', ಎಂದರೆ ಸ್ತ್ರೀಲಿಂಗ ಹೊರತು ಉಳಿದ ಪುಂನಪುಂಸಕಗಳೆರಡೂ ಈ ಶಬ್ದಕ್ಕೆ ಇವೆ ಎಂದು ತಿಳಿಯಬೇಕು.

೧೦. **जलोच्छ्वासाः, [1]परीवाहाः** ಪು, ನೀರು ತುಳುಕಾಡುವುದು ಅಥವಾ ಉಕ್ಕಿ ಹರಿಯುವುದಕ್ಕೆ ಹೆಸರು (overflow). **कूपकाः, विदारकाः** ಪು, ನೀರೂರಿಬರುವ ಹಳ್ಳ, ಸಣ್ಣ ಬಾವಿ (A hole dug

1. **परीवाहः, परिवाहः** ಎಂದು ಎರಡು ರೂಪಗಳೂ ಉಂಟು. ಅವುಗಳಲ್ಲಿ **परीवाह** ಶಬ್ದಕ್ಕೆ–ರಾಜರು ಧರಿಸಲು ಯೋಗ್ಯವಾದ ವಸ್ತು (The royal insignia) ಎಂಬ ಬೇರೇ ಅರ್ಥವೂ ಸಹ ಇರುವುದು. ವಿಶೇಷವಾಗಿ ರೂಢಿಯಲ್ಲಿರುವ ಅರ್ಥವು ನೀರು ತುಂಬಿ ಹೊರಗೆ ಹರಿಯುವುದು ಎಂದು (The overflowing of a tank; a drain to carry off excess of water). ಪಂಚತಂತ್ರದ ಒಂದು ಶ್ಲೋಕವನ್ನು ಔಚಿತ್ಯದಿಂದ ಈ ಸಂದರ್ಭದಲ್ಲಿ (ಭಟ್ಟಕ್ಷೀರಸ್ವಾಮಿ ಮುಂತಾದ) ವ್ಯಾಖ್ಯಾನಕಾರರು ಜ್ಞಾಪಿಸಿರುತ್ತಾರೆ. ಅದು ಯಾವುದೆಂದರೆ—

'उपार्जितानामर्थानां त्याग एव हि रक्षणम् ।
तडागोदरसंस्थानां परीवाह इवाम्भसाम् ॥'

(ಸಂಪಾದಿಸಿದ ಹಣಕ್ಕೆ ದಾನಮಾಡುವುದೇ ರಕ್ಷಣೆಯು; ಕೆರೆಯಲ್ಲಿರುವ ನೀರಿಗೆ ಹೊರಗೆ ಹರಿದುಬರುವಿಕೆಯೇ ಭದ್ರತೆಯು. ಇಲ್ಲವಾದರೆ ಕಟ್ಟೆಯೇ ಒಡೆದುಹೋಗುವ ಅಪಾಯ ಸಂಭವಿಸುವುದೆಂದು ಈ ಶ್ಲೋಕದ ತಾತ್ಪರ್ಯ.)

**उडुपं तु प्लवः कोलः स्रोतोऽम्बुसरणं स्वतः ।**
**आतरस्तरपण्यं स्यात् द्रोणी काष्ठाम्बुवाहिनी ॥ ११ ॥**

ಉಡುಪಂ ತು ಪ್ಲವಃ ಕೋಲಃ ಸ್ರೋತೋಽಂಬುಸರಣಂ ಸ್ವತಃ ।
ಆತರಸ್ತರಪಣ್ಯಂ ಸ್ಯಾತ್ ದ್ರೋಣೀ ಕಾಷ್ಠಾಂಬುವಾಹಿನೀ ॥ ೧೧ ॥

---

for water in the dry bed of a river; a small well).

ದೋಣಿ ಮುಂತಾದುದರಿಂದ ದಾಟಲು ಅರ್ಹವಾದ ಹೊಳೆ ಮುಂತಾದುದಕ್ಕೆ **नाव्यम्** ಎಂದು ಹೆಸರು (A stream, river or sea navigable or accessible by a boat or ship). ಈ ಶಬ್ದವು ಮೂರು ಲಿಂಗಗಳಲ್ಲಿಯೂ ಇರುವುದು. **नौः, तरणिः, तरिः** ಈ ೩, ಹಡಗಿಗೆ ಹೆಸರು (A boat or ship). ಇವು ಸ್ತ್ರೀಲಿಂಗ ಶಬ್ದಗಳು. **तरणी, तरी, तरीः** ಎಂದು ಸ್ತ್ರೀಲಿಂಗದಲ್ಲಿ ವಿಕಲ್ಪರೂಪಗಳು. **तरीः** ಎಂಬುದು **लक्ष्मी** ಶಬ್ದದಹಾಗೆ; **तरी** ಎಂಬುದು **नदी** ಶಬ್ದದಹಾಗೆ; **तरिः** ಎಂಬುದು **मति** ಶಬ್ದದಹಾಗೆ ಹೇಳಬೇಕೆಂದು ತಿಳಿಯಬೇಕು.

೧೧. **उडुपम्, प्लवः, कोलः** ೩, ಹರಿಗೋಲು, ತೆಪ್ಪ (A float or a raft). ಅಕೃತಕವಾಗಿ ತಾನಾಗಿಯೇ ಹರಿಯುವ ಹೊಳೆಗೆ **स्रोतः ( स्वतः अम्बुसरणं )** ಎಂದು ಹೆಸರು (A natural stream or current). ಇದು ಸಕಾರಾಂತ ನಪುಂಸಕ ಶಬ್ದ.

**आतरः, तरपण्यम्** ೨, ಹೊಳೆಯನ್ನು ದಾಟಿಸುವವನಿಗೆ ಕೊಡುವ ಹಣ (Fare for being ferried over a river). **द्रोणी (काष्ठाम्बुवाहिनी)** ಎಂದರೆ ನೀರು ಹಿಡಿಯುವುದಕ್ಕೂ ಹೊರುವುದಕ್ಕೂ ಬಿಡುವುದಕ್ಕೂ ಮಾಡಿರುವ ಮರದ ಪಾತ್ರೆ 'ಬಕೆಟ್ಟು' ಅಥವಾ 'ಟಬ್ಬು' (A wooden trough, tub or bucket). **काष्ठं** ಎಂಬುದು ಉಪಲಕ್ಷಣವಾದ್ದರಿಂದ ನೀರು ಹಾಕುವ ಈ ಪಾತ್ರೆಯು ಮರದಿಂದಲೇ ಮಾಡಿರಬೇಕೆಂದು ನಿಯಮವಿಲ್ಲ. ಕಲ್ಲು ತಗಡು, ಎಲೆ ಮುಂತಾದುವರಿಂದ ಮಾಡಲ್ಪಟ್ಟ ದೋಣಿ, ದೊನ್ನೆ, ಮುಂತಾದುದಕ್ಕೂ ಇದೇ ಹೆಸರು.

सांयात्रिकः पोतवणिक् कर्णधारस्तु नाविकः ।
नियामकाः पोतवाहाः कूपको गुणवृक्षकः ॥ १२ ॥

ಸಾಂಯಾತ್ರಿಕಃ ಪೋತವಣಿಕ್ ಕರ್ಣಧಾರಸ್ತು ನಾವಿಕಃ ।
ನಿಯಾಮಕಾಃ ಪೋತವಾಹಾಃ ಕೂಪಕೋ ಗುಣವೃಕ್ಷಕಃ ॥ ೧೨ ॥

नौकादण्डः क्षेपणी स्यादरित्रं केनिपातकः ।
अभ्रिः स्त्री काष्ठकुद्दालः सेकपात्रं तु सेचनम् ॥ १३ ॥

ನೌಕಾದಂಡಃ ಕ್ಷೇಪಣೀ ಸ್ಯಾದರಿತ್ರಂ ಕೇನಿಪಾತಕಃ ।
ಅಭ್ರಿಃ ಸ್ತ್ರೀ ಕಾಷ್ಠಕುದ್ದಾಲಃ ಸೇಕಪಾತ್ರಂ ತು ಸೇಚನಮ್ ॥ ೧೩ ॥

---

೧೨. **सांयात्रिकः, पोतवणिक्** ೨, ಹಡಗಿನಲ್ಲಿ 'ವ್ಯಾಪಾರ ಮಾಡುವವನು (Voyaging merchant). **कर्णधारः, नाविकः** ೨, ಹಡಗನ್ನು ನಡೆಯಿಸುವವನು (Sailor, boatman or helmsman). **नियामकाः, पोतवाहाः** ೨, ಹಡಗು ನಡೆಯಿಸುವ ಕಾರ್ಯ ನಿರ್ವಾಹಕರು (The pilot or the crew). **कूपकः, गुणवृक्षकः** ೨, ಹಡಗಿನ ಮುಖ್ಯಸ್ತಂಭ (The main mast).

೧೩. **नौकादण्डः, क्षेपणी** ೨, ದೋಣಿಯನ್ನು ನಡೆಯಿಸುವ ಗಡೆ (The oar). **अरित्रम्, केनिपातकः** ೨, ಹಡಗಿನ ಲಂಗರು (The rudder).

**अभ्रिः, काष्ठकुद्दालः** ೨, ದೋಣಿ ಅಥವಾ ಹಡಗಿನಲ್ಲಿ ಗಡ್ಡೆ ಕಟ್ಟಿಕೊಂಡಿರುವ ಉಪ್ಪು ಮುಂತಾದುದನ್ನು ಅಗಿಯುವ ಮರದ ಗುದ್ದಲಿ (A wooden scraper or shovel). **सेकपात्रम्, सेचनम्** ೨, (ಹಡಗಿನೊಳಗೆ ಬಂದು ಸೇರಿರುವ) ನೀರನ್ನು ಹೊರಗೆ ಚಲ್ಲುವ ಗೆರೆಸೆ (A bucket).

ಕೆಲವು ತಾಳಪತ್ರ ಗ್ರಂಥಗಳಲ್ಲಿ ಮುಂದೆ ಹೇಳಿರುವ ಎರಡು ಪಙ್ಕ್ತಿಗಳಿವೆ ಎಂದು ಭಟ್ಟಕ್ಷೀರಸ್ವಾಮಿಯು ಮತ್ತು ಇತರ ವ್ಯಾಖ್ಯಾಕಾರರು ತಿಳಿಸಿರುವರು.

**क्लीबेऽर्धनावं नावोऽर्धेऽतीतनौकेऽतिनु त्रिषु ।**
**त्रिष्वागाधात्प्रसन्नोऽच्छः कलुषोऽनच्छ आविलः ॥ १४ ॥**

ಕ್ಲೀಬೇಽರ್ಧನಾವಂ ನಾವೋಽರ್ಧೇಽತೀತನೌಕೇಽತಿನು ತ್ರಿಷು ।
ತ್ರಿಷ್ವಾಗಾಧಾತ್ಪ್ರಸನ್ನೋಽಚ್ಛಃ ಕಲುಷೋಽನಚ್ಛ ಆವಿಲಃ ॥ ೧೪ ॥

---

**'यानपात्रं तु पोतोऽब्धिभवे त्रिषु समुद्रियम् ।**
**सामुद्रिको मनुष्योऽब्धिजाता सामुद्रिका च नौः ॥'**

ಯಾನಪಾತ್ರಂ ತು ಪೋತೋಽಬ್ಧಿಭವೇ ತ್ರಿಷು ಸಮುದ್ರಿಯಮ್ ।
ಸಾಮುದ್ರಿಕೋ ಮನುಷ್ಯೋಽಬ್ಧಿಜಾತಾ ಸಾಮುದ್ರಿಕಾ ಚ ನೌಃ ॥'

**यानपात्रम्, पोतः** ೨, ನೀರಿನ ಮೇಲೆ ಹೋಗಲು ಉಪಯೋಗಿಸುವ ಸಣ್ಣ ದೋಣಿ ಅಥವಾ ಸಣ್ಣ ಹಡಗು (A small ship or rowing boat; 'Vessel for going'). ಸಮುದ್ರದಲ್ಲಿ ಹುಟ್ಟಿದುದಕ್ಕೆ (that which is produced in or relating to the sea; marine; oceanic) **समुद्रियम्** ಎಂದು ಹೆಸರು. ಈ ಶಬ್ದವು ಮೂರು ಲಿಂಗಗಳಲ್ಲಿಯೂ ಇರುವುದು. **सामुद्रिकः** ಎಂದರೆ ನಾವಿಕ ಅಥವಾ ಸಮುದ್ರಯಾನದ ವೃತ್ತಿಯುಳ್ಳವನು (A mariner or seaman). **सामुद्रिका** ಎಂದರೆ ಸಮುದ್ರಕ್ಕೆ ಸಂಬಂಧ ಪಟ್ಟುದಕ್ಕೆ ಅಥವಾ ಹಡಗಿಗೆ ಹೆಸರು (Relating to the ship; sea faring; or a ship).

೧೪. ಹಡಗಿನ ಅರ್ಧಭಾಗಕ್ಕೆ (Half of a ship) **अर्धनावम्** ಎಂದು ಹೆಸರು. ಇದು ನಪುಂಸಕ ಶಬ್ದ. **अतीतनौकः, अतिनु** ೨, ಹಡಗನ್ನು ದಾಟಿ ಅಥವಾ ಹಡಗಿನಿಂದ ಹೊರಗೆ ಬಂದುದು (Passed out of a ship or landed). **अतीता नौः येन—अतीतनौकः** (ಪುಲ್ಲಿಂಗ). **नावं अतिक्रान्तम् (स्थलम्, जलम्)—अतिनु** (ನಪುಂಸಕಲಿಂಗ).

**निम्नं गभीरं गम्भीरमुत्तानं तद्विपर्यये ।**
**अगाधमतलस्पर्शे कैवर्ते दाशधीवरौ ॥ १५ ॥**

ನಿಮ್ನಂ ಗಭೀರಂ ಗಂಭೀರಮುತ್ತಾನಂ ತದ್ವಿಪರ್ಯಯೇ ।
ಅಗಾಧಮತಲಸ್ಪರ್ಶೇ ಕೈವರ್ತೇ ದಾಶಧೀವರೌ ॥ ೧೫ ॥

---

**त्रिषु** ಎಂದು ಹೇಳಿರುವುದರಿಂದ **अतिनु** ಶಬ್ದಕ್ಕೆ ಮೂರು ಲಿಂಗಗಳೂ ಉಂಟು. **अतिनु अतिनुनी अतिनूनि**; (ಪ್ರಥಮಾ ಮತ್ತು ದ್ವಿತೀಯಾ); **अतिनुना, अतिनावा अतिनुभ्याम् अतिनुभिः** (ತೃತೀಯಾ); **अतिनुने, अतिनावे अतिनुभ्याम् अतिनुभ्यः** (ಚತುರ್ಥೀ) ಈ ರೀತಿಯಾಗಿ ನಪುಂಸಕ ಶಬ್ದ ಹೇಳಬೇಕು. **अतिनौः** ಎಂದೇ ಪುಲ್ಲಿಂಗದಲ್ಲಿಯೂ, ಸ್ತ್ರೀಲಿಂಗದಲ್ಲಿಯೂ ಕೂಡ ಆಗುವುದು. ಹೇಗೆಂದರೆ **अतिनौः पुमान्; अतिनौः स्त्री। अतिनौः अतिनावौ अतिनावः** ಎಂದು **ग्लौ** ಶಬ್ದದಂತೆ ಹೇಳಬೇಕು.

**प्रसन्नः, अच्छः** ೨, ನಿರ್ಮಲವಾದುದು (Clear, transparent or pure). **कलुषः, अनच्छः, आविलः** ३, ಕೊಳೆಯಾದುದು, ಕಶ್ಮಲವಾದುದು (Turbid or impure).

**प्रसन्न** ಶಬ್ದದಿಂದ ಹಿಡಿದು ಮುಂದಕ್ಕೆ **अगाध** ಶಬ್ದವೂ ಸೇರಿಸಿಕೊಂಡು ಇರುವ ಶಬ್ದಗಳೆಲ್ಲವೂ ಮೂರು ಲಿಂಗಗಳಲ್ಲಿಯೂ ಇರುತ್ತವೆ ಎಂಬ ಸೂಚನೆಯನ್ನು ಗಮನದಲ್ಲಿಡಬೇಕು.

೧೫. **निम्नम्, गभीरम्, गम्भीरम्** ३, ಆಳವಾಗಿರುವುದು (Deep). ಅದಕ್ಕೆ ವಿಪರ್ಯಯವಾದುದು ಎಂದರೆ ಆಳವಿಲ್ಲದುದಕ್ಕೆ (Shallow) **उत्तानम्** ಎಂದು ಹೆಸರು. **अगाधम्, अतलस्पर्शम्** ೨, ಅತ್ಯಂತ ಆಳವಾದುದು, ತಳ ಸಿಗದೇ ಇರುವುದು (Bottomless). **कैवर्तः, दाशः, धीवरः** ३, ಬೆಸ್ತರವನು (Fisherman).

**आनायः पुंसि जालं स्याच्छणसूत्रं पवित्रकम् ।**
**मत्स्याधानी कुवेणी स्याद्बडिशं मत्स्यवेधनम् ॥ १६ ॥**

ಆನಾಯಃ ಪುಂಸಿ ಜಾಲಂ ಸ್ಯಾಚ್ಛಣಸೂತ್ರಂ ಪವಿತ್ರಕಮ್ ।
ಮತ್ಸ್ಯಾಧಾನೀ ಕುವೇಣೀ ಸ್ಯಾದ್ಬಡಿಶಂ ಮತ್ಸ್ಯವೇಧನಮ್ ॥ ೧೬ ॥

**पृथुरोमा झषो मत्स्यो मीनो वैसारिणोऽण्डजः ।**
**विसारः शकुली चाथ गडकः शकुलार्भकः ॥ १७ ॥**

ಪೃಥುರೋಮಾ ಝಷೋ ಮತ್ಸ್ಯೋ ಮೀನೋ ವೈಸಾರಿಣೋಽಂಡಜಃ ।
ವಿಸಾರಃ ಶಕುಲೀ ಚಾಥ ಗಡಕಃ ಶಕುಲಾರ್ಭಕಃ ॥ ೧೭ ॥

---

೧೬. **आनायः, जालम्** ೨, ಬಲೆ (Net). **आनाय** ಶಬ್ದವು ಪುಲ್ಲಿಂಗವು. (**आनीयन्ते मत्स्याः अनेन** ಎಂದು ವ್ಯುತ್ಪತ್ತಿ). **शणसूत्रम्, पवित्रकम्** ೨, ಬಲೆಯ ದಾರ, ನೂಲು ಅಥವಾ ಹಗ್ಗ (Strings of a net; pack thread).

**मत्स्याधानी, कुवेणी** ೨, ಮೀನುಗಳನ್ನು ಹಿಡಿದು ಹಾಕಿಕೊಳ್ಳುವ ಬುಟ್ಟಿ (Fish-basket). **बडिशम्, मत्स्यवेधनम्** ೨, ಗಾಳ (Fish-hook). **बडिशा, बडिशी** ಎಂದೂ **बलिशम्, बलिशा, बलिशी** ಎಂದೂ **ल** ಕಾರ ಮಧ್ಯವಾಗಿಯೂ, **व** ಕಾರಾದಿಯಾಗಿಯೂ, **बडिश** ಶಬ್ದದ ರೂಪಾಂತರಗಳುಂಟು ಮತ್ತು ಅವುಗಳಿಗೆ ಮೂರು ಲಿಂಗಗಳೂ ಉಂಟು.

೧೭. **पृथुरोमा, झषः, मत्स्यः, मीनः, वैसारिणः, अण्डजः विसारः, शकुली** ಈ ೮, ಮೀನಿಗೆ ಹೆಸರುಗಳು (Fish). **गडकः, शकुलार्भकः** ಮೀನಿನ ಮರಿ ಅಥವಾ ಒಂದು ವಿಶೇಷತರಹದ ಮೀನು (The young of any fish; or Gold-fish).

# सहस्रदंष्ट्रः पाठीन उलूपी शिशुकः समौ ।
# नलमीनश्चिलिचिमः प्रोष्ठी तु शफरी द्वयोः ॥ १८ ॥

ಸಹಸ್ರದಂಷ್ಟ್ರಃ ಪಾಠೀನ ಉಲೂಪೀ ಶಿಶುಕಃ ಸಮೌ ।
ನಲಮೀನಶ್ಚಿಲಿಚಿಮಃ ಪ್ರೋಷ್ಠೀ ತು ಶಫರೀ ದ್ವಯೋಃ ॥ ೧೮ ॥

---

೧೮. [1]**सहस्रदंष्ट्रः**, ಸಾವಿರ ಹಲ್ಲುಗಳುಳ್ಳ ಮೀನು ('Thousand-toothed' fish). [2]**पाठीनः** 'ತುರಿಮುಳ್ಳು ಮೀನು' (*Silurus Pelorius*, or *Boalis*; a sort of sheat fish). **उलूपी, शिशुकः** ೨, ತಿಮಿಂಗಿಲ ವರ್ಗಕ್ಕೆ ಸೇರಿದ ಒಂದು ತರಹದ ಮೀನು. ಇದನ್ನು 'ಪುಟ್ಟ ತಿಮಿಂಗಿಲ' ಎಂದು ಹೇಳಬಹುದು. 'ಉಣಿಚೆ ಮೀನು' ಎಂದೂ ಕರೆಯುತ್ತಾರೆ (A porpoise or a 'pocket whale', *Delphinus Gangeticus*).

**नलमीनः, चिलिचिमः** (**चिलिचिमिः**) ೨, ಜೊಂಡಿನ ಮಧ್ಯೆ ಆಳವಿಲ್ಲದ ಜಲದಲ್ಲಿ ಸಂಚರಿಸುವ ಒಂದು ಬಗೆಯ ಮೀನು. 'ಜಂಬು ಮೀನು' ಎನ್ನುತ್ತಾರೆ (A kind of fish living among reeds in shallow water). **प्रोष्ठी, शफरी** ಈ ೨, ಒಂದು ತರಹದ, ಥಟ್ಟನೆ ಹಾರುವ ಮತ್ತು ಶುಭ್ರವಾಗಿ ಪ್ರಕಾಶಿಸುವ ಸಣ್ಣ ಮೀನು (A kind of bright and glistening little fish that darts about in shallow water, *Cyprinus Saphore*). ಈ ೨ ಶಬ್ದಗಳೂ ಸ್ತ್ರೀಲಿಂಗ; ಪುಲ್ಲಿಂಗದಲ್ಲಿ **प्रोष्ठः, शफरः** ಎಂದೂ ಆಗುವುವು.

---

1-2. **सहस्रदंष्ट्रः**—Professors of Zoology are of opinion that this fish belongs to the species, *Salache* (of the Shark family) having numerous teeth, constantly replaced by new teeth as they become worn down or fall out.

**पाठीनः** This fish is provided with spines barbed or serrated, which arm their fins and which constitute formidable defensive weapons.

क्षुद्राण्डमत्स्यसंघातः पोताधानमथो झषाः ।
रोहितो मद्गुरः शालो राजीवः शकुलस्तिमिः ॥ १९ ॥

ಕ್ಷುದ್ರಾಂಡಮತ್ಸ್ಯಸಂಘಾತಃ ಪೋತಾಧಾನಮಥೋ ಝಷಾಃ |
ರೋಹಿತೋ ಮದ್ಗುರಃ ಶಾಲೋ ರಾಜೀವಃ ಶಕುಲಸ್ತಿಮಿಃ || ೧೯ ||

---

೧೯. ಮೀನಿನ ಮರಿಗಳ ಗುಂಪಿಗೆ **पोताधानम्** ಎಂದು ಹೆಸರು (Small fry, a shoal of young fish). **क्षुद्राण्डमत्स्यसंघातः** ಎಂದು ಶ್ಲೋಕದ ಪಙ್ಕ್ತಿಯಲ್ಲಿಯೇ ಇದರ ಅರ್ಥವಿರುವುದು.

**रोहितः, मद्गुरः, शालः, राजीवः, शकुलः, तिमिः, तिमिंगिलः** ಈ ೭, ಏಳು ಬೇರೆ ಬೇರೆ ವಿಧವಾದ ಮೀನುಗಳ ಹೆಸರು (Different kinds of fish). ಹೇಗೆಂದರೆ—

**रोहितः** ಕೆಂಪು ಮೀನು (*Cyprinus Rohitaka*); **मद्गुरः,** ಜಲದಲ್ಲಿಯೇ ಮುಳುಗಿಕೊಂಡಿರುವ ಮೀನು (*Macropteronatus Magur*); **शालः (सालः),** ಇದೊಂದು ಶ್ಲಾಘ್ಯಜಾತಿಯ ಮೀನು, ಚಕ್ರಾಂಕಿತವಾಗಿರುವುದೆಂದು ಹೇಳುತ್ತಾರೆ (A species of fish coverd with cycloid scales; *Ophiocephalus Wrahl,*) **राजीवः,** ರೇಖೆಗಳು ಅಥವಾ ಪಟ್ಟೆಗಳುಳ್ಳ ಮೀನು; ಇದನ್ನು **वज्राभः** ವಜ್ರದಹಾಗೆ ಪ್ರಕಾಶಿಸುವ ಮೀನು ಎಂದು ಭಟ್ಟಕ್ಷೀರಸ್ವಾಮಿಯವರು ಹೇಳುತ್ತಾರೆ. ಕೆಲವರು 'ರಾಜ ಮೀನು' ಎನ್ನುತ್ತಾರೆ (A species of fish with streaks or stripes); **शकुलः,** ವೇಗವಾಗಿ ಹೋಗುವ ಶಕ್ತಿಯುಳ್ಳ ಮೀನು (A Gold fish or the 'gilt-head') **तिमिः** ಅತ್ಯಂತವಾಗಿ ದೊಡ್ಡದಾಗಿರುವ 'ತಿಮಿ' ಎಂಬ ಮೀನು (A kind of whale or fish of an enormous size).

**तिमिंगिलादयश्चाथ यादांसि जलजन्तवः ।**
**तद्भेदाः शिशुमारोद्रशङ्कवो मकरादयः ॥ २० ॥**

ತಿಮಿಂಗಿಲಾದಯಶ್ಚಾಥ ಯಾದಾಂಸಿ ಜಲಜಂತವಃ ।
ತದ್ಭೇದಾಃ ಶಿಶುಮಾರೋದ್ರಶಂಕವೋ ಮಕರಾದಯಃ ॥ ೨೦ ॥

---

೨೦. [1] **तिमिंगिलः (तिमिंगिरः)** ಎಂದರೆ (**तिमिं गिलति, गिरति वा** ಎಂದು) ತಿಮಿಯನ್ನು ನುಂಗುವಂತಹ ಅತ್ಯಂತ ದೊಡ್ಡ ಮೀನು 'ತಿಮಿಂಗಿಲ' ಎಂದೇ ಕನ್ನಡದಲ್ಲಿಯೂ ಹೇಳುತ್ತಾರೆ. ('Timi-swallower', a fabulous fish of an enormous size). **आदयः** ಎಂದು ಹೇಳಿರುವುದರಿಂದ ಇನ್ನೂ ಇದೇ ತರಹದ ಮತ್ತು ಇದಕ್ಕಿಂತಲೂ ದೊಡ್ಡದಾದ ಮೀನುಗಳು, ಎಂದರೆ **तिमितिमिंगिलः, तिमिंगिलगिलः, (नन्दीवर्तः), नन्द्यावर्तः** ಮುಂತಾದವು ಬೇರೆಬೇರೆ ಇವೆ ಎಂದು ಹೇಳುತ್ತಾರೆ (Varieties of fabulous fish of enormous size).

It is interesting to note that the skeleton of a mammoth of the deep recently discovered measures 87 feet in length; and inside the bony framework, a number of people could easily walk about. —Picture on page 61 of the *Miracle of Life* edited by Harold Wheeler.

---

1. ತಿಮಿ, ತಿಮಿಂಗಿಲ, ತಿಮಿತಿಮಿಂಗಿಲ, ತಿಮಿಂಗಿಲಗಿಲ ಮುಂತಾದ ಅತ್ಯಂತ ಅದ್ಭುತಾಕಾರವಾದ ಮತ್ಸ್ಯವಿಶೇಷಗಳು ಮತ್ತು ಮಕರಗಳು ಕೇವಲ ಪುರಾಣದ ಕಲ್ಪನೆಗಳೆಂದು ಭಾವಿಸಬೇಕಾದುದಿಲ್ಲ. ಪ್ರಾಣಿಶಾಸ್ತ್ರಜ್ಞರು ಪ್ರಾಚೀನ ಪ್ರಾಣಿವರ್ಗದಲ್ಲಿ, ಅದರಲ್ಲಿಯೂ ಮಹಾಮತ್ಸ್ಯಗಳ ಚರಿತ್ರೆಯ ಆಧುನಿಕಾನ್ವೇಷಣಗಳನ್ನು ನಡೆಯಿಸುತ್ತ, ಹೊಸ ಹೊಸದಾಗಿ ಕಂಡುಬರುತ್ತಿರುವ ಪ್ರತ್ಯಕ್ಷ ನಿದರ್ಶನಗಳಿಂದ ಸ್ತಬ್ಧರಾಗಿದ್ದಾರೆಂಬುದು, ಈ ಕೆಳಗೆ ಹೇಳಿರುವ ಒಬ್ಬ ಪ್ರಾಣಿಶಾಸ್ತ್ರಜ್ಞನಾದ ಪಾಶ್ಚಾತ್ಯ ಪಂಡಿತನ ಮಾತಿನಿಂದ ತಿಳಿಯುವುದು—

**यादांसि, जलजन्तवः** ೨, ಜಲಚರ ಪ್ರಾಣಿಗಳು (Aquatic animals). **शिशुमारः, उद्रः, शुङ्कुः, मकरः** ಇವು ಒಂದೊಂದೂ ಜಲಚರಪ್ರಾಣಿಗಳ ಬೇರೆ ಬೇರೆ ಜಾತಿ ಹೇಗೆಂದರೆ—

**शिशुमारः** ನೆಗಳು ('Child-killer' the Gangetic porpoise; An alligator also is named '**शिशुमार**'). **उद्रः** 'ನೀರು ನಾಯಿ' (An otter). **शङ्कुः** ಇದನ್ನು 'ನೀರು ಹಂದಿ' ಎನ್ನುತ್ತಾರೆ (A kind of fish belonging to the family of *Rhinobatidae* or *Raiidae*, Skates or Rays). [1] **मकरः** ಇದನ್ನು ಮೊಸಳೆ ಅಥವಾ ಒಂದು ಮತ್ಸ್ಯವಿಶೇಷವೆಂದು ಸಾಮಾನ್ಯವಾಗಿ ಹೇಳುತ್ತಾರೆ. ಇದೊಂದು ಭಯವನ್ನುಂಟುಮಾಡುವ ಜಲಚರವು (A kind of sea-monster which may be either the shark, the crocodile or dolphin or any such wild aquatic animal). **आद्यः** ಎಂದು ಹೇಳಿರುವುದರಿಂದ ಜಲಹಸ್ತಿ (Water elephant) ಮುಂತಾದ ಇನ್ನೂ ಅನೇಕ ಜಾತಿಯ ಪ್ರಾಣಿಗಳು ಭೂಚರಗಳಿಗಿಂತಲೂ ಮೊದಲು ಜಲದಲ್ಲಿ ಸಂಚರಿಸುವಂತಹವು ಇದ್ದವು ಎಂದು ತಿಳಿಯಬೇಕು. "For millions and millions of years the seas, and probably the seas only, were populous. They housed a medley of animals......"

—L. R. Brightwell, F.Z.S.

---

"The story of the fishes is the most difficult of all the vertebrate chapters in the tale of life to piece together, and the half of it is not yet told;..............of many other fish we can only guess their shapes and affinities from tantalizing enigmatic fragments"—L. R. Brightwell, F. Z. S.

1. '**मकरः**' ಎಂಬ ಶಬ್ದವು ಅನೇಕ ಪದಗಳಲ್ಲಿ ಅನೇಕಾರ್ಥಗಳನ್ನು ಸೂಚಿಸಿ ವಾಚಕರ ಮನಸ್ಸಿನಲ್ಲಿ ಕುತೂಹಲವನ್ನುಂಟುಮಾಡುವುದು. ಹೇಗೆಂದರೆ-

ಹಿಂದೆ ಸ್ವರ್ಗವರ್ಗದಲ್ಲಿ '**शङ्खो मकरकच्छपौ**' ಎಂಬಲ್ಲಿ ಕುಬೇರನ ಒಂದು ವಿಶೇಷ ನಿಧಿಗೆ (One of the 9 special treasures of Kubera) 'ಮಕರ' ಎಂದೂ, **मकरध्वज आत्मभूः** ಎಂಬಲ್ಲಿ '**मकर**' ಶಬ್ದವು ಮನ್ಮಥನ ಬಾವುಟದ ಗುರುತಿಗೂ (Sign of Cupid's flag), ದಿಗ್ವರ್ಗದಲ್ಲಿ '**राशीनामुदयो लग्नं ते तु मेषवृषादयः**' ಎಂಬಲ್ಲಿ 'ಮಕರ'ವು ರಾಶಿಗಳಲ್ಲಿ ಒಂದು (10th sign of the Zodiac) ಎಂದೂ ಪ್ರಯೋಗಿಸಲ್ಪಟ್ಟಿದೆ. ಇಷ್ಟೇ ಅಲ್ಲದೆ ಲೋಕದಲ್ಲಿ ರೂಢಿಯಾಗಿರುವ **मकरकुण्डल,** ಎಂದರೆ ಕಿವಿಗೆ ಹಾಕಿಕೊಳ್ಳುವ 'ಮಕರಾ'ಕಾರವಾದ ಆಭರಣ (An ear-ring, shaped like a Makara), ಮತ್ತು **मकरकेतु, मकरकेतन, मकरलाञ्छन** ಎಂದರೆ 'ಮಕರ' ವನ್ನೇ ಗುರುತಾಗಿ ಅಥವಾ ಬಾವುಟವಾಗಿಟ್ಟುಕೊಂಡಿರುವ (Having the Makara for an emblem or having a fish on his banner) ಮನ್ಮಥನ ಇತರ ಹೆಸರುಗಳೂ ಇವೆ. ಹೀಗೆ ಅನೇಕ ಪದಗಳಲ್ಲಿ 'ಮಕರ' ಶಬ್ದವು ಬಂದಿದೆ. ಇವುಗಳಲ್ಲಿ ಎಲ್ಲದರಲ್ಲಿಯೂ ಬರುವ ಆ **मकर** ಶಬ್ದಕ್ಕೆ ವ್ಯುತ್ಪತ್ತಿಯನ್ನು ವ್ಯಾಖ್ಯಾನಕಾರರು ಆಯಾ ಅರ್ಥಕ್ಕೆ ತಕ್ಕಹಾಗೆ ಮಾಡಿರುತ್ತಾರೆ. ಹೇಗೆಂದರೆ:— √ **कृञ्-हिंसायाम्** (To injure, to kill) **कृणोति इति करः, मनुष्याणां करः-मकरः** ('Man-killer') ಮನುಷ್ಯನನ್ನು ಕೊಲ್ಲುವುದು 'ಮಕರ' ಎಂದೂ, √ **मकि—मण्डने** (To adorn) **मङ्क्ते इति मकः, मकं राति इति मकरः** (That which yields or bestows an ornament or adornment), ಯಾವುದು ಭೂಷಣದಾಯಕವೋ ಅದು 'ಮಕರ' ಎಂದೂ, ಈ ರೀತಿಗಳಲ್ಲಿ ಶುಭಾಶುಭ ಸಂದರ್ಭಗಳಿಗನುಸಾರವಾಗಿ ಅರ್ಥವು ತೋರಿಬರುವ ಹಾಗೆ ಮಾಡಿರುತ್ತಾರೆ. ಆದರೆ '**मा कुर्यात् किंचिदिति त्रस्यन्ति अस्मात्-मकरः** ಇದರ ವಿಚಾರದಲ್ಲಿ ಯಾವ ತಂಟೆಗೂ ಹೋಗಬಾರದೆಂದು, ಯಾವುದರಿಂದ ಜನರು ಭಯಪಡುತ್ತಾರೋ ಅದು '**ಮಕರ**' ಎಂದು ಭಟ್ಟಕ್ಷೀರಸ್ವಾಮಿಯು ಮಾಡಿರುವ ವ್ಯುತ್ಪತ್ತಿಯು ಸ್ವಾರಸ್ಯವಾದುದು.

[**ಸಂಸ್ಕೃತದಲ್ಲಿ ಪದಗಳ ಅರ್ಥಗಾಂಭೀರ್ಯವೂ, ಸ್ವಾರಸ್ಯವೂ ಮತ್ತು ಅವುಗಳ ಪ್ರಯೋಗದ ಔಚಿತ್ಯವೂ ಹೇಗಿರುವುದೆಂಬುದನ್ನು ಬಾಲಕರಿಗೆ ತಿಳಿಸಿ ಅವರ ಆಸಕ್ತಿಯನ್ನು ಅಮರವಾಣಿಯಲ್ಲಿ ಹೆಚ್ಚಿಸಬೇಕೆಂದು ಈ ಟಿಪ್ಪಣಿಯ ಉದ್ದೇಶ**].

**स्यात्कुलीरः कर्कटकः कूर्मे कमठकच्छपौ ।**
**ग्राहोऽवहारो नक्रस्तु कुम्भीरोऽथ महीलता ॥ २१ ॥**

ಸ್ಯಾತ್ಕುಲೀರಃ ಕರ್ಕಟಕಃ ಕೂರ್ಮೇ ಕಮಠಕಚ್ಛಪೌ ।
ಗ್ರಾಹೋಽವಹಾರೋ ನಕ್ರಸ್ತು ಕುಂಭೀರೋಽಥ ಮಹೀಲತಾ ॥ ೨೧ ॥

---

೨೧. [1]**कुलीरः, कर्कटकः** ೨, ನಳ್ಳಿ ಅಥವಾ ಏಡಿ (Crab). [2]**कूर्मः, कमठः, कच्छपः** ೩, ಆಮೆ (Tortoise).

---

1. **कुलीर** ಶಬ್ದದ ವ್ಯುತ್ಪತ್ತಿಯನ್ನು ವ್ಯಾಖ್ಯಾಕಾರರು ಎರಡು ತರಹವಾಗಿ ಮಾಡಿರುತ್ತಾರೆ ಮಣ್ಣಿನಲ್ಲಿ ಅಥವಾ ಕೆಸರಿನಲ್ಲಿ ಅಡಗಿಕೊಂಡಿರುವುದು ಕುಲೀರವು (**'कौ लीयते इति'–कुलीरः**) ಎಂದೂ, ಅಥವಾ ಜನಕನನ್ನೇ 'ತಿಂದುಬಿಡುವ' ಸ್ವಭಾವವುಳ್ಳುದು (**'कुलं अस्य अस्तीति'–कुली, 'कुलिनं ईरयति इति'–कुलीरः, 'जनकभक्षकत्वात्'**) ಕುಲವನ್ನೇ ವದರಿಬಿಡುವುದು ಕುಲೀಲವು ಎಂದು. ಏಕೆಂದರೆ ನಳ್ಳಿಗೆ ಮರಿಗಳಾದೊಡನೆ ಮುದಿ ನಳ್ಳಿಯು ನಾಶವಾಗುವುದು ಎಂದು ಪ್ರತೀತಿ. (The old Crab is supposed to perish on producing the young ones). ಈ ಅರ್ಥವೇ ಬರುವ ಹಾಗೆ **कर्कटक** ಶಬ್ದದ ವ್ಯುತ್ಪತ್ತಿಯೂ ಸಹ ಇರುವುದು. **कृ-हिंसायाम्,** (to injure, to kill) **कृणोति इति कर्, कट्-वर्षावरणयोः** (To rain, to divide, to encompass) **कटति इति कटः, कर् चासौ कटश्च, कर्कटः, स एव कर्कटकः** (That which surrounds, divides and kills).

ಇದಕ್ಕೆ ಚಮತ್ಕಾರವಾಗಿ ಭಟ್ಟಕ್ಷೀರಸ್ವಾಮಿಯು, ಕೌಟಿಲ್ಯನ ಈ ಮಾತನ್ನು ಉದಾಹರಿಸಿರುತ್ತಾನೆ.— **'कर्कटसधर्माणो हि राजपुत्राः जनकभक्षाः'** ರಾಜನನ್ನೇ ಹಿಂಸಿಸಿ 'ಭಕ್ಷಿಸು'ವಂತಹ ರಾಜಪುತ್ರರು ಕರ್ಕಟಕ ಸಮಾನ ಧರ್ಮವುಳ್ಳವರು ಎಂದು.

2. **कूर्मः** ಎಂದರೆ **'कुत्सितः कौ वा, ऊर्मिः अस्य'** ಹಾಸ್ಯಾಸ್ಪದ ವೇಗವುಳ್ಳುದು ಅಥವಾ ನೆಲದ ಮೇಲೆ ವೇಗವುಳ್ಳುದು, **ಕೂರ್ಮವು.**

The proverbial race of the slow and steady tortoise may be recalled here.

**गण्डूपदः किंचुलको निहाका गोधिका समे ।**
**रक्तपा तु जलौकायां स्त्रियां भूम्नि जलौकसः ॥ २२ ॥**

ಗಂಡೂಪದಃ ಕಿಂಚುಲಕೋ ನಿಹಾಕಾ ಗೋಧಿಕಾ ಸಮೇ ।
ರಕ್ತಪಾ ತು ಜಲೌಕಾಯಾಂ ಸ್ತ್ರಿಯಾಂ ಭೂಮ್ನಿ ಜಲೌಕಸಃ ॥ ೨೨ ॥

**मुक्तास्फोटः स्त्रियां शुक्तिः शङ्खः स्यात्कम्बुरस्त्रियौ ।**
**क्षुद्रशङ्खाः शङ्खनखाः शम्बूका जलशुक्तयः ॥ २३ ॥**

ಮುಕ್ತಾಸ್ಫೋಟಃ ಸ್ತ್ರಿಯಾಂ ಶುಕ್ತಿಃ ಶಂಖಃ ಸ್ಯಾತ್ಕಂಬುರಸ್ತ್ರಿಯೌ ।
ಕ್ಷುದ್ರಶಂಖಾಃ ಶಂಖನಖಾಃ ಶಂಬೂಕಾ ಜಲಶುಕ್ತಯಃ ॥ ೨೩ ॥

---

**ग्राहः, अवहारः,** ೨, ಮಹಾ ಮತ್ಸ್ಯದ ಹೆಸರುಗಳು. ಇದನ್ನು ಒಬ್ಬೊಬ್ಬರು ಒಂದೊಂದು ಹೆಸರಿನಿಂದ ಕರೆಯುತ್ತಾರೆ. 'ಹಾವು ಮೀನು' ಎಂದು ಕೆಲವರು, 'ವಿಷದಬಳ್ಳಿಯ ಮೀನು' ಎಂದು ಕೆಲವರು, 'ಮೊಸಳೆಯ ಒಂದು ಜಾತಿ' ಎಂದು ಮತ್ತೂ ಕೆಲವರೂ ಹೇಳುತ್ತಾರೆ. ಆದರೆ **ग्रह–उपादाने, गृह्णाति इति–ग्राहः** ಎಂದರೆ 'ಹಿಡಿಯುವುದು' ಎಂಬ ಧಾತುವಿನ ಮೂಲಾರ್ಥದಿಂದ, 'ಹಿಡಿದು ಸೆಳೆದು ಭಕ್ಷಿಸುವ' ಭಯಂಕರವಾದ ಜಲಚರ ಮೃಗಗಳಾದ ದೊಡ್ಡ ಹಾವು, ಮೀನು, ಮೊಸಳೆ, ನೀರೆಮ್ಮೆ, ನೀರಾನೆ ಮುಂತಾದವುಗಳೆಲ್ಲವನ್ನೂ ಈ ಹೆಸರುಗಳಿಂದ ಕರೆಯಬಹುದೆಂದು ತಿಳಿಯಬೇಕು (A rapacious marine monster like any large fish, snake, crocodile, shark, alligator, water-elephant, hippopotamus etc.)

**नक्रः, कुम्भीरः** ೨, ಆನೆಯನ್ನು ಹಿಡಿದು ಎಳೆದುಕೊಳ್ಳುವಂತಹ ಬಲವಾದ ಮೊಸಳೆ (A crocodile which can seize and draw in even an elephant. It is known as the Gangetic Crocodile or the long-nosed alligator).

೨೨. **महीलता, [1]गण्डूपद:, [2]किञ्चुलक:** ೩, ತೇವದ ಮಣ್ಣಿನಲ್ಲಿ ಹುಟ್ಟುವ ಹುಳು (Earth worm). 'ಮಹೀಲತಾ' ಎಂಬುದರಿಂದ ಈ ಹುಳುವು ಮಣ್ಣಿನ ಬಳ್ಳಿಯಂತಿರುವುದೆಂದು ತಿಳಿಯುವುದು.

**निहाका, गोधिका** ೨, ನೀರುಡುವು (A large lizard-like animal in water, an alligator, an aquatic iguana, *Lacerta Godica*). **रक्तपा, जलौका (जलूका), जलौकस:** ೩, ರಕ್ತವನ್ನು ಹೀರುವ ಜಿಗಣೆಯ ಹೆಸರು (Leech). ಇವು ಸ್ತ್ರೀಲಿಂಗ ಶಬ್ದಗಳು. **जलौकस:** ಎಂಬುದು 'ಭೂಮ್ನಿ', ಎಂದರೆ ನಿತ್ಯ ಬಹುವಚನಾಂತದಲ್ಲಿ ಪ್ರಯೋಗವೆಂದು ತಿಳಿಯಬೇಕು.

೨೩. **मुक्तास्फोट:, शुक्ति:** (ಸ್ತ್ರೀಲಿಂಗ) ೨, ಮುತ್ತಿನ ಚಿಪ್ಪು (Pearl Oyster), **शङ्ख:, कम्बु:** ೨, ಶಂಖ (Shell or Conch) ಎರಡೂ ಪುಂನಪುಂಸಕ ಶಬ್ದಗಳು. **क्षुद्रशङ्खा:, शङ्खनखा:** ೨, ಸಣ್ಣ ಸಣ್ಣ ಶಂಖಗಳು (Small shells), **शम्बूका:, जलशुक्तय:** ೨, ಕಪ್ಪೆಚಿಪ್ಪು (Any shell or conch, a bivalve shell), **शम्बूक** ಶಬ್ದವು ಸ್ತ್ರೀಲಿಂಗ ಪುಲ್ಲಿಂಗಗಳೆರಡರಲ್ಲಿಯೂ ಉಂಟು. **शम्बुक:** ಎಂಬ ಪುಲ್ಲಿಂಗ ಶಬ್ದವೂ ಕೂಡ ರೂಢಿಯಲ್ಲಿರುವುದು.

---

1-2. **गण्डूपद:- गण्डु:** (ಗಂಟುಗಳೇ) **पदानि** (ಕಾಲುಗಳು) **अस्य** (ಅದಕ್ಕೆ), ಎಂದರೆ ಮಣ್ಣು ಹುಳುವಿನ ಶರೀರದ ಗಂಟುಗಳೇ ಅದಕ್ಕೆ ಕಾಲುಗಳು ಎಂದು ಆ ಜಂತುವಿನ ಲಕ್ಷಣವೊಂದನ್ನು ಸೂಚಿಸುವ ಶಬ್ದವು ಅದಕ್ಕೆ ಹೆಸರಾಗಿರುವುದು (The earth worm's body is full of joints or segments). ಹೀಗೆಯೇ ಸಾಮಾನ್ಯವಾಗಿ ಪ್ರಾಣಿಗಳ ಹೆಸರುಗಳೆಲ್ಲವೂ ಅವುಗಳ ಯಾವುದಾದರೂ ಒಂದು ಲಕ್ಷಣವನ್ನು ಸೂಚಿಸುವ ಶಬ್ದದಿಂದ ಹುಟ್ಟಿರುತ್ತವೆ. ಹಾಗೆಯೇ ಇಲ್ಲಿ **किञ्चुलक:—किंचित्** (ಸ್ವಲ್ಪ) **चुलुम्पति** ಈ ಕಡೆ ಆ ಕಡೆ ಚಲಿಸುವುದು, ಹೊರಳುವುದು, ಉರುಳುವುದು ಎಂದು ಈ ಮಣ್ಣು ಹುಳುವಿನ ಮತ್ತೊಂದು ಸ್ವಭಾವವನ್ನು ಸೂಚಿಸುವುದು (The worm that moves to and fro or rolls about a little).

भेके मण्डूकवर्षाभूशालूरप्लवदर्दुराः ।
शिली गण्डूपदी भेकी वर्षाभ्वी कमठी डुलिः ॥ २४ ॥

ಭೇಕೇ ಮಂಡೂಕವರ್ಷಾಭೂಶಾಲೂರಪ್ಲವದರ್ದುರಾಃ ।
ಶಿಲೀ ಗಂಡೂಪದೀ ಭೇಕೀ ವರ್ಷಾಭ್ವೀ ಕಮಠೀ ಡುಲಿಃ ॥ ೨೪ ॥

मद्गुरस्य प्रिया शृङ्गी दुर्नामा दीर्घकोशिका ।
जलाशयो जलाधारस्तत्रागाधजलो ह्रदः ॥ २५ ॥

ಮದ್ಗುರಸ್ಯ ಪ್ರಿಯಾ ಶೃಂಗೀ ದುರ್ನಾಮಾ ದೀರ್ಘಕೋಶಿಕಾ ।
ಜಲಾಶಯೋ ಜಲಾಧಾರಸ್ತತ್ರಾಗಾಧಜಲೋ ಹ್ರದಃ ॥ ೨೫ ॥

आहावस्तु निपानं स्यादुपकूपजलाशये ।
पुंस्येवान्धुः प्रहिः कूप उदपानं तु पुंसि वा ॥ २६ ॥

ಆಹಾವಸ್ತು ನಿಪಾನಂ ಸ್ಯಾದುಪಕೂಪಜಲಾಶಯೇ ।
ಪುಂಸ್ಯೇವಾಂಧುಃ ಪ್ರಹಿಃ ಕೂಪ ಉದಪಾನಂ ತು ಪುಂಸಿ ವಾ ॥ ೨೬ ॥

---

೨೪. **भेकः, मण्डूकः, वर्षाभूः, शालूरः, प्लवः, दर्दुरः** ೬, ಕಪ್ಪೆ (Frog). **शिली, गण्डूपदी** ೨, ಒಂದು ತರಹ ಎರೆಹುಳು, ಹೆಣ್ಣು ಕಪ್ಪೆಯೆಂದೂ ಕೆಲವರು ಹೇಳುತ್ತಾರೆ (A kind of worm, like the earth worm ; some say it is a female frog). **भेकी, वर्षाभ्वी** ೨, ಹೆಣ್ಣು ಕಪ್ಪೆ (Female frog). **कमठी, डुलिः** ೨, ಹೆಣ್ಣು ಆಮೆ (Female tortoise).

೨೫. **शृङ्गी** ಎಂದರೆ 'ಮದ್ಗುರ' ವೆಂಬ ಮೀನಿನ ಹೆಣ್ಣು ಜಾತಿ (A female silurus or sheat-fish). **दुर्नामा, दीर्घकोशिका** ೨, ದೊಡ್ಡ ಜಿಗಣೆಯುಹಾಗೆ ಇರುವ ಜಲಜಂತು (Cockle or 'Horse-leech'). ಇದು ಆನೆಯು ರಕ್ತವನ್ನೂ ಹೀರಬಲ್ಲುದೆಂದು ಹೇಳುತ್ತಾರೆ.

**जलाशयः, जलाधारः** ೨, ನೀರಿಗೆ ಆಧಾರವಾದ ಕೊಳ, ಸರೋವರ ಮುಂತಾದುದು (A lake or pond). **ह्रदः** ಎಂದರೆ ಆಳವಾದ ನೀರುಳ್ಳ ಸ್ಥಳ ಅಥವಾ ಮಡುವು (A place where water is deep or a deep lake).

नेमिस्त्रिकास्य वीनाहो मुखबन्धनमस्य यत् ।
पुष्करिण्यां तु खातं स्यादखातं देवखातकम् ॥ २७ ॥

ನೇಮಿಸ್ತ್ರಿಕಾಸ್ಯ ವೀನಾಹೋ ಮುಖಬಂಧನಮಸ್ಯ ಯತ್ ।
ಪುಷ್ಕರಿಣ್ಯಾಂ ತು ಖಾತಂ ಸ್ಯಾದಖಾತಂ ದೇವಖಾತಕಮ್ ॥ ೨೭ ॥

पद्माकरस्तडागोऽस्त्री कासारः सरसी सरः ।
वेशन्तः पल्वलं चाल्पसरो वापी तु दीर्घिका ॥ २८ ॥

ಪದ್ಮಾಕರಸ್ತಡಾಗೋಽಸ್ತ್ರೀ ಕಾಸಾರಃ ಸರಸೀ ಸರಃ ।
ವೇಶನ್ತಃ ಪಲ್ವಲಂ ಚಾಲ್ಪಸರೋ ವಾಪೀ ತು ದೀರ್ಘಿಕಾ ॥ ೨೮ ॥

೨೬. **आहावः, निपानम्** ೨, 'ಉಪಕೂಪ ಜಲಾಶಯೇ' ಎಂದರೆ ಭಾವಿಯ ಹತ್ತಿರ, ಪಶುಗಳು ಮುಂತಾದ ಪ್ರಾಣಿಗಳಿಗೋಸ್ಕರ ಮಾಡಿರುವ ನೀರು ತೊಟ್ಟಿ, ಎಂದು ಮೂಲಪಙ್ಕ್ತಿಯಲ್ಲಿಯೇ ಅರ್ಥ ಸೂಚಿಸಲ್ಪಟ್ಟಿದೆ (Water-trough for cattle near a well).

**अन्धुः, प्रहिः, कूपः, उदपानम्** ೪, ಭಾವಿ (Well). ಇಲ್ಲಿ 'ಉದಪಾನಂ ತು ಪುಂಸಿ ವಾ' ಎಂದಿರುವುದರಿಂದ **उदपान** ಶಬ್ದವು ನಪುಂಸಕಮಾತ್ರವಲ್ಲದೆ ಪುಲ್ಲಿಂಗವೂ ಆಗುವುದು. ಉಳಿದ ಶಬ್ದಗಳಿಗೆ 'ಪುಂಸ್ಯೇವ' ಎಂದು ಹೇಳಿರುವುದರಿಂದ ಪುಲ್ಲಿಂಗ ಮಾತ್ರ ಎಂದು ತಿಳಿಯಬೇಕು.

೨೭. ಭಾವಿಯ ನೀರು ಸೇದುವುದಕ್ಕೆ ಮಾಡಿರುವ ತಿರುಗಣೆ, ರಾಟೆ, ಕಪಿಲೆ, ಯಾತ ಮುಂತಾದುದಕ್ಕೆ (A pulley or any simple machine for raising water) **त्रिका** ಎಂದು ಹೆಸರು. **वीनाहः** ಎಂದರೆ ಭಾವಿಯ ಕಟ್ಟೆ (The top or cover of a well; the brick or stone wall round the mouth of a well).

**पुष्करिणी, खातम्** ೨, ಮನುಷ್ಯರು ತೋಡಿ ಮಾಡಿರುವ ಕೊಳ (An artificial pond or tank). **अखातम्, देवखातकम्** ೨, ಸ್ವಾಭಾವಿಕವಾಗಿ ಉಂಟಾಗಿರುವ ಕೊಳ, ದೊಣೆ, ಮುಂತಾದುದು. (A natural pond). ಈ ೨ ಶಬ್ದಗಳಿಗೆ ಪುಲ್ಲಿಂಗವೂ ಉಂಟು.

**खेयं तु परिखाधारस्त्वम्भसां यत्र धारणम् ।**
**स्यादालवालमावालमावापोऽथ नदी सरित् ॥ २९ ॥**

ಖೇಯಂ ತು ಪರಿಖಾಧಾರಸ್ತ್ವಂಭಸಾಂ ಯತ್ರ ಧಾರಣಮ್ ।
ಸ್ಯಾದಾಲವಾಲಮಾವಾಲಮಾವಾಪೋಽಥ ನದೀ ಸರಿತ್ ॥ ೨೯ ॥

**तरङ्गिणी शैवलिनी तटिनी ह्रादिनी धुनी ।**
**स्रोतस्वती द्वीपवती स्रवन्ती निम्नगापगा ॥ ३० ॥**

ತರಂಗಿಣೀ ಶೈವಲಿನೀ ತಟಿನೀ ಹ್ರಾದಿನೀ ಧುನೀ ।
ಸ್ರೋತಸ್ವತೀ ದ್ವೀಪವತೀ ಸ್ರವಂತೀ ನಿಮ್ನಗಾಪಗಾ ॥ ೩೦ ॥

---

೨೮. **पद्माकरः, तडागः (तटाकः), कासारः, सरसी, सरः** ೫, ತಾವರೆಗಳುಳ್ಳ ಕೆರೆ ಅಥವಾ ಕೊಳ (A lotus pond). **वेशन्तः, पल्वलम्, अल्पसरः** ೩, ಸಣ್ಣ ಕೊಳ ಅಥವಾ ಕುಂಟೆ (A small pond). **वापी, दीर्घिका** ೨, ದೊಡ್ಡ ಕೊಳ ಅಥವಾ ಕಲ್ಯಾಣಿ (A large pond).

೨೯-೩೦. **खेयम्, परिखा** ೨, ಕೋಟೆಯ ಕಂದಕ (Moat or ditch). ಅಣೆಕಟ್ಟಿನಿಂದ ನೀರನ್ನು ಒಂದುಕಡೆ ಸಂಗ್ರಹಿಸಿ ಕೆರೆಯಂತೆ ಮಾಡಿರುವುದಕ್ಕೆ (A reservoir or a big lake or a canal) **आधारः** ಎಂದು ಹೆಸರು. '**अम्भसां यत्र धारणम्**' ಎಂದು ಮೂಲ ಪಙ್ಕ್ತಿಯಲ್ಲಿಯೇ ಅರ್ಥವು ಸೂಚಿತವಾಗಿದೆ.

**आलवालम्, आवालम्, आवापः** ೩, ಗಿಡದ ಪಾತಿ (A basin round a tree for holding water).

**नदी, सरित्, तरङ्गिणी, शैवलिनी, तटिनी, ह्रादिनी, धुनी, स्रोतस्वती, (स्रोतस्विनी) द्वीपवती, स्रवन्ती, निम्नगा, आपगा (अपगा)** ೧೨, ನದಿಯ ಹೆಸರುಗಳು (A river). ಮುಂದಿನ ಹೆಚ್ಚಿಗೆ ಪಙ್ಕ್ತಿಯಲ್ಲಿರುವ **कूलंकषा, निर्झरिणी, रोधोवक्रा, सरस्वती** ಎಂಬ ೪ ಪದಗಳೂ ಕೂಡ ನದಿಯ ಹೆಸರುಗಳು.

(कूलंकषा निर्झरिणी रोधोवक्रा सरस्वती।)
गङ्गा विष्णुपदी जह्नुतनया सुरनिम्नगा।
भागीरथी त्रिपथगा त्रिस्रोता भीष्मसूरपि ॥ ३१ ॥

(ಕೂಲಂಕಷಾ ನಿರ್ಝರಿಣೀ ರೋಧೋವಕ್ರಾ ಸರಸ್ವತೀ।)
ಗಂಗಾ ವಿಷ್ಣುಪದೀ ಜಹ್ನುತನಯಾ ಸುರನಿಮ್ನಗಾ ।
ಭಾಗೀರಥೀ ತ್ರಿಪಥಗಾ ತ್ರಿಸ್ರೋತಾ ಭೀಷ್ಮಸೂರಪಿ ॥ ೩೧ ॥

कालिन्दी सूर्यतनया यमुना शमनस्वसा।
रेवा तु नर्मदा सोमोद्भवा मेकलकन्यका ॥ ३२ ॥

ಕಾಲಿಂದೀ ಸೂರ್ಯತನಯಾ ಯಮುನಾ ಶಮನಸ್ವಸಾ ।
ರೇವಾ ತು ನರ್ಮದಾ ಸೋಮೋದ್ಭವಾ ಮೇಕಲಕನ್ಯಕಾ ॥ ೩೨ ॥

करतोया सदानीरा बाहुदा सैतवाहिनी।
शतद्रुस्तु शुतुद्रिः स्याद्विपाशा तु विपाट् स्त्रियाम् ३३

ಕರತೋಯಾ ಸದಾನೀರಾ ಬಾಹುದಾ ಸೈತವಾಹಿನೀ ।
ಶತದ್ರುಸ್ತು ಶುತುದ್ರಿಸ್ಯಾದ್ವಿಪಾಶಾ ತು ವಿಪಾಟ್ ಸ್ತ್ರಿಯಾಮ್ ॥ ೩೩ ।

---

೩೧. **गङ्गा, विष्णुपदी, जह्नुतनया, सुरनिम्नगा, भागीरथी, त्रिपथगा, त्रिस्रोताः, भीष्मसूः** ೮, ಗಂಗಾನದಿಯ ಹೆಸರುಗಳು (The *Ganges*). **त्रिस्रोताः** ಎಂಬುದು **स**ಕಾರಾಂತ ಶಬ್ದವು.

೩೨. **कालिन्दी, सूर्यतनया, यमुना, शमनस्वसा** ೪, ಯಮುನಾ ನದಿಯ ಹೆಸರುಗಳು (The *Yamuna*).

**रेवा, नर्मदा, सोमोद्भवा, मेकलकन्यका** ೪, ನರ್ಮದಾ ನದಿಯ ಹೆಸರುಗಳು (The *Narmada*).

೩೩. **करतोया, सदानीरा** ೨, 'ಕರತೋಯಾ' ಎಂಬ ನದಿ (The *Karatoya*, a river in the North-East of Bengal). ಇದು ಪಾರ್ವತಿಯನ್ನು ಕನ್ಯಾದಾನ ಮಾಡಿಕೊಡುವಾಗ ಶಿವನ ಹಸ್ತದಲ್ಲಿ ಹಾಕಿದ ಉದಕದಿಂದ ಹುಟ್ಟಿದುದು (This river is said to have sprung from the water poured into the hand of Siva at his marriage with Parvati and dropped by him on the ground).

**बाहुदा, सैतवाहिनी** ೨, ಬಾಹುದಾನದಿ (The *Bahuda*; or *Vitasta*; modern *Jhelum*). ಲಿಖಿತನೆಂಬ ಒಬ್ಬ ಋಷಿಗೆ ಕರಗಳನ್ನು (ಬಾಹು) ಕೊಟ್ಟಂತಹ ನದಿ ('Arm-giver' to Likhita whose hands were cut off by king Sudyumna as a punishment for having eaten some fruit in Sankha's harmitage without permission from the owner).

**शतद्रुः, शतुद्रिः** ೨, ಶತದ್ರು ನದಿ. ವಸಿಷ್ಠನು ಪುತ್ರಶೋಕದಿಂದ ಹೈಮವತೀ ನದಿಯಲ್ಲಿ ಬಿದ್ದಾಗ ಆ ಮಹಾ ತಪಸ್ವಿಯ ಭಯದಿಂದ ನೂರು ಭಾಗವಾಗಿ ಒಡೆದಂತಹ ನದಿ ಎಂದು ಹೇಳುತ್ತಾರೆ ('Flowing in a hundred branches'; the river is said to have branched off into a hundred streams fearing the sage Vasistha who fell into it through grief for the death of his son. The river is now called the *Sutlej* which unites with the *Vipasa* or the modern *Beas*, south-east of Amritsar).

**विपाशा, विपाट्** ೨, ವಿಪಾಶಾ ಅಥವಾ ಪಾಶಮೋಚಿನೀ ಎಂಬ ನದಿ. (**वसिष्ठं विपाशितवती-विपाट्**) ವಸಿಷ್ಠನ ಪಾಶಗಳನ್ನು ಬಿಡಿಸಿದ ನದಿ (The *Vipasa* or the modern *Beas*, one of

**शोणो हिरण्यवाहः स्यात्कुल्याऽल्पा कृत्रिमा सरित् ।**
**शरावती वेत्रवती चन्द्रभागा सरस्वती ॥ ३४ ॥**

ಶೋಣೋ ಹಿರಣ್ಯವಾಹಃ ಸ್ಯಾತ್ಕುಲ್ಯಾಽಲ್ಪಾ ಕೃತ್ರಿಮಾ ಸರಿತ್ ।
ಶರಾವತೀ ವೇತ್ರವತೀ ಚಂದ್ರಭಾಗಾ ಸರಸ್ವತೀ ॥ ೩೪ ॥

**कावेरी सरितोऽन्याश्च संभेदः सिन्धुसंगमः ।**
**द्वयोः प्रणाली पयसः पदव्यां त्रिपु तूत्तरौ ॥ ३५ ॥**

ಕಾವೇರೀ ಸರಿತೋಽನ್ಯಾಶ್ಚ ಸಂಭೇದಃ ಸಿಂಧುಸಂಗಮಃ ।
ದ್ವಯೋಃ ಪ್ರಣಾಲೀ ಪಯಸಃ ಪದವ್ಯಾಂ ತ್ರಿಷು ತೂತ್ತರೌ ॥ ೩೫ ॥

the five rivers of the Punjab. It is said to have unnoosed and cut the cord with which Vasishtha had bound himself while falling into the river to end his life lamenting for his son slain by Viswamitra). ಈ ೨ ಶಬ್ದಗಳೂ ಸ್ತ್ರೀಲಿಂಗ. **विपाट्** ಶಬ್ದವು **श**ಕಾರಾಂತವು.

ಈ ನದಿಗಳ ವಿಚಾರದಲ್ಲಿ ಸಂಗ್ರಹವಾಗಿ ತಿಳಿಸಿರುವ ಕಥಾ ಸಂದರ್ಭಗಳ ವರ್ಣನೆಯು ಮಹಾಭಾರತದ ಆದಿ, ಭೀಷ್ಮ, ಶಾಂತಿ ಪರ್ವಗಳಲ್ಲಿ ವಿಸ್ತಾರವಾಗಿದೆ. ಕುತೂಹಲಿಗಳಾದ ಬಾಲಕರೂ, ಸಂಸ್ಕೃತಿಯ ಪ್ರೇಮಿಗಳೂ ಆಯಾ ಕಥೆಗಳನ್ನು ಓದಿಕೊಳ್ಳಬಹುದು.

೩೪-೩೫. **शोणः, हिरण्यवाहः** ೨, ಶೋಣ ನದಿ (The river *Shona* or *Sone*; it has its source in the Nagapore District and falls into the *Ganges* above Patna). **कुल्या** ಎಂದರೆ ಅಗೆದು ಮಾಡಿರುವ ಸಣ್ಣ ಹೊಳೆ ಅಥವಾ ಕಾಲುವೆ (A canal or a channel dug for irrigation purposes).

**शरावती, वेत्रवती, चन्द्रभागा, सरस्वती, कावेरी** ಇವೆಲ್ಲವೂ

**देविकायां सरय्वां च भवे दाविकसारवौ ।**
**सौगन्धिकं तु कह्लारं हल्लकं रक्तसन्ध्यकम् ॥ ३६ ॥**

ದೇವಿಕಾಯಾಂ ಸರಯ್ವಾಂ ಚ ಭವೇ ದಾವಿಕಸಾರವೌ ।
ಸೌಗಂಧಿಕಂ ತು ಕಲ್ಹಾರಂ ಹಲ್ಲಕಂ ರಕ್ತಸಂಧ್ಯಕಮ್ ॥ ೩೬ ॥

---

ಬೇರೆ ಬೇರೆ ನದಿಗಳ ಹೆಸರು (Names of various rivers). 'ಅನ್ಯಾಶ್ಚ' ಎಂದು ಹೇಳಿರುವುದರಿಂದ **ಕೃಷ್ಣಾ, ಗೋದಾವರೀ, ತುಂಗಭದ್ರಾ** ಮುಂತಾದ ಅನೇಕ ನದಿಗಳೂ, ಉಪನದಿಗಳೂ ಸೂಚಿತ ವಾಗಿವೆ ಎಂದು ತಿಳಿಯಬೇಕು.

**संभेदः, सिन्धुसङ्गमः** ೨, ನದಿಯ ಸಂಗಮಕ್ಕೆ (ಮತ್ತೊಂದು ನದಿಯೊಂದಿಗೆ ಅಥವಾ ಸಮುದ್ರ ಸೇರುವುದಕ್ಕೆ) ಹೆಸರು (Confluence of two rivers or confluence of a river at its mouth, with the ocean).

'**पयसः पदव्यां**' ಎಂದರೆ ನೀರು ಹರಿಯುವ ದಾರಿ ಎಂಬಲ್ಲಿ (Drain or water course) **प्रणाली** ಎಂದು ಹೆಸರು. ಇದು **प्रणालः** ಎಂದು ಪುಲ್ಲಿಂಗವೂ ಆಗುವುದು.

೩೬. ದೇವಿಕಾನದಿಯಲ್ಲಿ ಹುಟ್ಟಿದುದು ಅಥವಾ ಅದಕ್ಕೆ ಸೇರಿದುದಕ್ಕೆ (Coming from or relating to the river *Devika*) **दाविकः** ಎಂದೂ, ಸರಯೂ ನದಿಯಲ್ಲಿ ಹುಟ್ಟಿದುದು ಅಥವಾ ಅದಕ್ಕೆ ಸಂಬಂಧಪಟ್ಟುದುದಕ್ಕೆ (Coming from or relating to the river *Sarayu*) **सारवः** ಎಂದೂ ಹೆಸರು. **दाविक, सारव** ಶಬ್ದಗಳು ಮೂರು ಲಿಂಗಗಳಲ್ಲಿಯೂ ಇರುತ್ತವೆ. **दाविकी, सारवी** ಎಂದು ಸ್ತ್ರೀಲಿಂಗದಲ್ಲಿಯೂ, **दाविकम्, सारवम्** ಎಂದು ನಪುಂಸಕ ದಲ್ಲಿಯೂ ಆಗುತ್ತವೆ.

**सौगन्धिकम्, कह्लारम्** ೨, ಎಳೆಗೆಂಪು ಅಥವಾ ಬಿಳಿಯ ನೈದಿಲೆ (Pink or white water-lily). **हल्लकम्, रक्तसन्ध्यकम्** ೨, ಕೆಂಪು ನೈದಿಲೆ (A red water-lily).

**स्यादुत्पलं कुवलयमथ नीलाम्बुजन्म च ।**
**इन्दीवरं च नीलेऽस्मिन्सिते कुमुदकैरवे ॥ ३७ ॥**

ಸ್ಯಾದುತ್ಪಲಂ ಕುವಲಯಮಥ ನೀಲಾಂಬುಜನ್ಮ ಚ ।
ಇಂದೀವರಂ ಚ ನೀಲೇಽಸ್ಮಿನ್ ಸಿತೇ ಕುಮುದಕೈರವೇ ॥ ೩೭ ॥

**शालूकमेषां कन्दः स्याद्वारिपर्णी तु कुम्भिका ।**
**जलनीली तु शैवालं शैवलोऽथ कुमुद्वती ॥ ३८ ॥**

ಶಾಲೂಕಮೇಷಾಂ ಕಂದಃ ಸ್ಯಾದ್ವಾರಿಪರ್ಣೀ ತು ಕುಂಭಿಕಾ ।
ಜಲನೀಲೀ ತು ಶೈವಾಲಂ ಶೈವಲೋಽಥ ಕುಮುದ್ವತೀ ॥ ೩೮ ॥

**कुमुदिन्यां नलिन्यां तु बिसिनीपद्मिनीमुखाः ।**
**वा पुंसि पद्मं नलिनमरविन्दं महोत्पलम् ॥ ३९ ॥**

ಕುಮುದಿನ್ಯಾಂ ನಲಿನ್ಯಾಂ ತು ಬಿಸಿನೀ ಪದ್ಮಿನೀಮುಖಾಃ ।
ವಾ ಪುಂಸಿ ಪದ್ಮಂ ನಲಿನಮರವಿಂದಂ ಮಹೋತ್ಪಲಮ್ ॥ ೩೯ ॥

---

೩೭. **उत्पलम्, कुवलयम्** ೨, ನೈದಿಲೆಗೆ ಸಾಮಾನ್ಯವಾದ ಹೆಸರು (water-lily), **नीलाम्बुजन्म, इन्दीवरम्** ೨, ಕನ್ನೈದಿಲೆ (Blue water-lily). **कुमुदम्, कैरवम्** ೨, ಬಿಳಿಯ ನೈದಿಲೆ (White water-lily).

೩೮. **शालूकम्** ಎಂದರೆ ಮೇಲೆ ಹೇಳಿದ ಸೌಗಂಧಿಕಾದಿ ನೈದಿಲೆಗಳ ಗಡ್ಡೆಗೆ ಹೆಸರು (Root of the water-lily). **वारिपर्णी, कुम्भिका** ೨, ನೀರು ಕಾಗೆ (A kind of cormorant, '*Pistia Stratiotes*'). **जलनीली, शैवालम्, शैवलः** ೩, ಪಾಚಿ (Duck weed or green moss-like plant growing in pools).

**कुमुद्वती, कुमुदिनी** ೨, ಬಿಳಿಯ ನೈದಿಲೆಗಳುಳ್ಳ ಪ್ರದೇಶ (A place abounding in white lotus or lilies).

**सहस्रपत्रं कमलं शतपत्रं कुशेशयम् ।**
**पङ्केरुहं तामरसं सारसं सरसीरुहम् ॥ ४० ॥**

ಸಹಸ್ರಪತ್ರಂ ಕಮಲಂ ಶತಪತ್ರಂ ಕುಶೇಶಯಮ್ |
ಪಂಕೇರುಹಂ ತಾಮರಸಂ ಸಾರಸಂ ಸರಸೀರುಹಮ್ ॥ ೪೦ ॥

**बिसप्रसूनराजीवपुष्कराम्भोरुहाणि च ।**
**पुण्डरीकं सिताम्भोजमथ रक्तसरोरुहे ॥ ४१ ॥**

ಬಿಸಪ್ರಸೂನರಾಜೀವಪುಷ್ಕರಾಂಭೋರುಹಾಣಿ ಚ |
ಪುಂಡರೀಕಂ ಸಿತಾಂಭೋಜಮಥ ರಕ್ತಸರೋರುಹೇ ॥ ೪೧ ॥

**रक्तोत्पलं कोकनदं नालो नालमथास्त्रियाम् ।**
**मृणालं बिसमब्जादिकदम्बे षण्डमस्त्रियाम् ॥ ४२ ॥**

ರಕ್ತೋತ್ಪಲಂ ಕೋಕನದಂ ನಾಲೋ ನಾಲಮಥಾಸ್ತ್ರಿಯಾಮ್ |
ಮೃಣಾಲಂ ಬಿಸಮಬ್ಜಾದಿಕದಂಬೇ ಷಂಡಮಸ್ತ್ರಿಯಾಮ್ ॥ ೪೨ ॥

---

೩೯-೪೧. **नलिनी, बिसिनी, पद्मिनी** ೩, ತಾವರೆಯ ಬಳ್ಳಿ ಅಥವಾ ತಾವರೆಗಳ ಸಮೂಹ, ಅಥವಾ ಅವು ಇರುವ ಸರೋವರ (The lotus-stalk or plant or an assemblage of lotus flowers or a lotus pond). ಹೀಗೆಯೇ **कमलिनी, सरोजिनी, पङ्कजिनी** ಮುಂತಾದ ಶಬ್ದಗಳು ಇವೆ ಎಂದು '**पद्मिनीमुखाः**' ಎಂದು ಹೇಳಿರುವುದರಿಂದ ತಿಳಿಯಬೇಕು.

**पद्मम्, नलिनम्, अरविन्दम्, महोत्पलम्, सहस्रपत्रम्, कमलम्, शतपत्रम्, कुशेशयम्, पङ्केरुहम्, तामरसम्, सारसम्, सरसीरुहम्, बिसप्रसूनम्, राजीवम्, पुष्करम्, अम्भोरुहम्,** ೧೬, ತಾವರೆ ಹೂವಿಗೆ ಹೆಸರುಗಳು (Lotus). ಈ ಶಬ್ದಗಳು '**वा पुंसि**' ಎಂದು ಹೇಳಿರುವುದರಿಂದ ಪುಲ್ಲಿಂಗಗಳೂ ಆಗಬಹುದೆಂದು ತಿಳಿಯಬೇಕು.

करहाटः शिफाकन्दः किञ्जल्कः केसरोऽस्त्रियाम् ।
संवर्तिका नवदलं बीजकोशो वराटकः ॥ ४३ ॥

॥ इति वारिवर्गः ॥

ಕರಹಾಟಃ ಶಿಫಾಕಂದಃ ಕಿಂಜಲ್ಕಃ ಕೇಸರೋಽಸ್ತ್ರಿಯಾಮ್ ।
ಸಂವರ್ತಿಕಾ ನವದಲಂ ಬೀಜಕೋಶೋ ವರಾಟಕಃ ॥ ೪೩ ॥

॥ ಇತಿ ವಾರಿವರ್ಗಃ ॥

---

**पुण्डरीकम्, सिताम्भोजम्** ೨, ಬಿಳಿಯ ತಾವರೆಹೂವು (white lotus).

೪೨. **रक्तसरोरुहम्, रक्तोत्पलम्, कोकनदम्** ೩, ಕೆಂದಾವರೆ ಹೂವು (Red lotus). **नालः, नालम् (नाला, नाली)** ೨, ತಾವರೆದಂಟು (Stalk of the lotus or water lily). **मृणालम्, विसम् (बिशम्)** ೨, ತಾವರೆ ಬಳ್ಳಿಯ ಕೊಳವೆಗಳು ಅಥವಾ ನಾರು ಅಥವಾ ನಾರಿನಿಂದ ಕೂಡಿರುವ ತಿನ್ನಲು ಯೋಗ್ಯವಾದ ಅದರ ಗಡ್ಡೆ (Lotus fibre or stalk of a water lily or its edible fibrous root). **मृणाल, बिस** ಶಬ್ದಗಳಿಗೆ ಸ್ತ್ರೀಲಿಂಗ ಮಾತ್ರವಿಲ್ಲ, ಪುಂನಪುಂಸಕಗಳು ಉಂಟು. ತಾವರೆ ಮುಂತಾದ ಹೂವುಗಳ ಸಮೂಹಕ್ಕೆ (Assemblage of water-lilies) **षण्डम् (खण्डम्)** ಎಂದು ಹೆಸರು. ಇದು ಪುಂನಪುಂಸಕ ಲಿಂಗವು. ಪುಲ್ಲಿಂಗದಲ್ಲಿ **षण्ड** ಎಂದರೆ ಬಿಡಲ್ಪಟ್ಟಿರುವ ಹೋರಿ (A bull set at liberty) ಎಂದೂ ಅರ್ಥವಿದೆ.

೪೩. **करहाटः, शिफाकन्दः** ೨, ತಾವರೆ ಗಡ್ಡೆ (Root of a water-lily), **किञ्जल्कः, केसरः** ೨, ಹೂವುಗಳ ಕುಸುರು ಅಥವಾ ಕುಸುಮ (Filament), **संवर्तिका, नवदलम्** ೨, ಎಳೆಯ ರೇಕುಗಳು (New leaf of lilies and lotuses), **बीजकोशः, वराटकः** ೨, ತಾವರೆಯ ಕಾಯಿ (The seed vessel). ಇಲ್ಲಿಗೆ ವಾರಿವರ್ಗವು ಮುಗಿಯಿತು.

[1]उक्तं स्वर्व्योमदिक्कालधीशब्दादि सनाट्यकम् ।
पातालभोगि नरकं वारि चैषां च संगतम् ॥ १ ॥

[1]ಉಕ್ತಂ ಸ್ವರ್ವ್ಯೋಮದಿಕ್ಕಾಲಧೀಶಬ್ದಾದಿ ಸನಾಟ್ಯಕಮ್ ।
ಪಾತಾಲಭೋಗಿ ನರಕಂ ವಾರಿ ಚೈಷಾಂ ಚ ಸಂಗತಮ್ ॥ ೧ ॥

इत्यमरसिंहकृतौ नामलिङ्गानुशासने ।
स्वरादिकाण्डः प्रथमः साङ्ग एव समर्थितः ॥ २ ॥
॥ इति नामलिङ्गानुशासने 'अमरकोशे' प्रथमः काण्डः ॥

ಇತ್ಯಮರಸಿಂಹಕೃತೌ ನಾಮಲಿಂಗಾನುಶಾಸನೇ ।
ಸ್ವರಾದಿಕಾಂಡಃ ಪ್ರಥಮಃ ಸಾಙ್ಗ ಏವ ಸಮರ್ಥಿತಃ ॥ ೨ ॥
॥ ಇತಿ ನಾಮಲಿಂಗಾನುಶಾಸನೇ 'ಅಮರಕೋಶೇ' ಪ್ರಥಮಃ ಕಾಂಡಃ ॥

---

ಅಮರಸಿಂಹನು ತಾನು ರಚಿಸಿರುವ ನಾಮಲಿಂಗಾನುಶಾಸನದ ಮೊದಲನೆಯ ಕಾಂಡದಲ್ಲಿ (**स्वर्ग, व्योम, दिक्, काल, धी, शब्दादि, नाट्य, पातालभोगि, नरक, वारि**) ಸ್ವರ್ಗ, ವ್ಯೋಮ, ದಿಕ್, ಕಾಲ, ಧೀ, ಶಬ್ದಾದಿ, ನಾಟ್ಯ, ಪಾತಾಲಭೋಗಿ, ನರಕ, ವಾರಿ—ಈ ವರ್ಗಗಳಲ್ಲಿ ಆಯಾ ವರ್ಗಗಳಿಗೆ ಸಂಬಂಧಪಟ್ಟ ವಿಷಯಗಳೆಲ್ಲವನ್ನೂ ಸೇರಿಸಿ ಸಂಗ್ರಹಿಸಿ, ಸಮಗ್ರವಾಗಿ ನಮರ್ಥಿಸಿರುವೆನೆಂದು ಎರಡು ಶ್ಲೋಕಗಳಲ್ಲಿ ಹೇಳಿ ಪ್ರಥಮ ಕಾಂಡವನ್ನು ಮುಗಿಸಿರುವನು.

---

1. **उक्तं स्वर्व्योमदिक्कालधीवाक्छब्दादिनाट्यकम् ।**
ಉಕ್ತಂ ಸ್ವರ್ವ್ಯೋಮದಿಕ್ಕಾಲಧೀವಾಕ್ಛಬ್ದಾದಿನಾಟ್ಯಕಮ್ ।
ಎಂಬ ಪಾಠಾಂತರದ ಪ್ರಕಾರ ಶಬ್ದಾದಿವರ್ಗವನ್ನು ವಿಭಾಗಮಾಡಿ, ಅದರ ೨೨ನೆಯ ಶ್ಲೋಕದಲ್ಲಿ ಬರುವ 'ಶಬ್ದೇನಿನಾದನಿನದಧ್ವನಿಧ್ವಾನರವಸ್ವನಾಃ' ಎಂಬ ಪಙ್ಕ್ತಿಯವರೆಗೆ ವಾಗ್ವರ್ಗವೆಂದೂ, ಮುಂದಕ್ಕೆ ಶಬ್ದಾದಿವರ್ಗವೆಂದೂ, ಹಾಗೆಯೇ ಪಾತಾಲಭೋಗಿವರ್ಗದಲ್ಲಿ 'ಕಾದ್ರವೇಯಾಸ್ತದೀಶ್ವರಾಃ' ಎಂಬುದರ ವರೆಗೆ ಪಾತಾಲವರ್ಗವೆಂದೂ, ಮುಂದಿನದು ಭೋಗಿವರ್ಗವೆಂದೂ ದಕ್ಷಿಣದೇಶದ ಪಾಠವಿರುವುದು.

# ಅಮರಕೋಶದ ಪ್ರಥಮ ಕಾಂಡದ ವರ್ಗಗಳ
# ವಿಭಾಗ ಮತ್ತು ಶ್ಲೋಕಗಳ ಸಂಖ್ಯೆ

| | ವರ್ಗದ ಹೆಸರು | | ಶ್ಲೋಕಗಳ ಸಂಖ್ಯೆ |
|---|---|---|---|
| 1. | ಸ್ವರ್ಗವರ್ಗ | Celestial objects and Beings | 73 |
| 2-3. | ವ್ಯೋಮವರ್ಗ ಮತ್ತು ದಿಗ್ವರ್ಗ | Space, Atmosphere and the Heavens (3+35) | 38 |
| 4. | ಕಾಲವರ್ಗ | Time | 31 |
| 5. | ಧೀವರ್ಗ | Intellect, States and qualities abstract. | 17 |
| 6-7. | ಶಬ್ದಾದಿವರ್ಗ | Sounds and Speech | 25 |
| 8. | ನಾಟ್ಯವರ್ಗ | Music, Dancing and the Stage. | 38 |
| 9-10. | ಪಾತಾಲಭೋಗಿವರ್ಗ | The underworld and the Snakes. | 11 |
| 11. | ನರಕವರ್ಗ | Hell and Pain. | 3 |
| 12. | ವಾರಿವರ್ಗ | Water. | 43 |
| | | | 279 |

ಪ್ರಾರಂಭ ಶ್ಲೋಕಗಳು—

| | | |
|---|---|---|
| ಪ್ರಾರ್ಥನೆ ಮತ್ತು ಪಾರಿಭಾಷಿಕ | Introductory Verses, Invocation and explanation of the technique employed (1+4) | 5 |
| ಕಾಂಡಸಮಾಪ್ತಿಯ ಶ್ಲೋಕಗಳು | Concluding Verses | 2 |

ಒಟ್ಟು ಈ ಕಾಂಡದಲ್ಲಿ ಅಧಿಕ ಪಾಠಗಳು ಬಿಟ್ಟು 286 ಶ್ಲೋಕಗಳಿವೆ.



# ಅಮರಕೋಶದ ಶಬ್ದಾನುಕ್ರಮಣಿಕೆ

## ಪ್ರಥಮ ಕಾಂಡ

## OPINIONS

"Many scholars and patriots are now working for the spread of our ancient culture by facilitating the study of Samskrit--often devising and adopting easier methods of teaching and learning Samskrit. Some are eagerly working for making Samskrit the national language of India. In Madras, experiments are being conducted to show that a good working knowledge of Samskrit can be easily acquired within a period of six months.

To facilitate the easy study of Samskrit by an average Kannadiga, Mr. G. K. Thimmannachar—a scholar of no mean status and one who has studied the language in the traditional manner under his brilliant father—Vidwan Garani Krishnacharya—and also in the University for his M. A. Degree—has edited the standard Lexicon—"**Amarakosa**"—transliterated into Kannada with the words translated into Kannada and English. He has done the work most conscientiously and carefully in a spirit of service. The addition of alphabetical index of words in the Lexicon has made the publication most useful. The editor deserves our hearty congratulations.

It is for the Kannadigas now to enable the learned Editor to bring out more useful publications for the spread of Samskrit learning and thus our culture."

DR. A. N. NARASIMHIAH,

M.A., L.T., PH.D. (LOND.),

*Principal (Retd.), Maharaja's Sanskrit College, Mysore.*

"I went through the first part of your edition of the Amarakosa with great pleasure. The cultural revival which we are witnessing all over the country demands primarily a foundational knowledge of Samskrit. For this, the importance of the Amarakosa can hardly be exaggerated. This is generally realised. But we have been handicapped by the lack of a dependable edition suitable for beginners in the Kannada country. No doubt there is Rice's edition. But this work, although laudable as a pioneer venture, suffers from several drawbacks, the principal among which is that the separated words have not been indicated. Your edition embodying as it does a better text based upon subsequent research, and giving explanations based on the available commentaries supplies a great desideratum. With your life-long experience as a teacher, you have sensed exactly where the shoe pinches, and your notes are "the thing", neither laconic nor verbose. I feel that you have achieved in a great measure the objectives which you set before yourself in your Introduction. I can see that you have taken great pains, but that it has been a labour of love, no less than a 'pitri tarpana', a tribute to your learned father's memory, and to that long line of scholarly forbears, of which you are indeed a worthy representative. I can only hope that your labours will be rewarded by the wide recognition and acceptance which it deserves".

SRI K. GURU DUTT, I.A.S., (Retd.)

"Among the manifold blessings conferred on Independent India by its accredited father, revival of interest in the study of Samskrita as the gateway to the country's rich cultural heritage, deserves to rank supreme. Leaders of opinion and agencies occupied with educational reforms have acknowledged it. It is highly gratifying to note that the Committee for Educational Reform in Mysore has planned a compulsory study of Samskrita in all stages of education and has thus provided for sustained application which alone ensures mastery, here as elsewhere. The Committee have, rightly as I am inclined to think, advocated that its study must commence with recitation of the slokas of Amara."

* * * *

"The present edition of Amarakosa, indicating the places of correct stoppage, would enable a reader to spot out the gender of a noun unmistakably and foresee its declensional paradigms. The Kannada and English equivalents of each noun meet an important need. Incidentally many of the principles governing euphonic combination would also be learnt through examples."

* * * *

"Sri Thimmannachar has rendered a timely and valuable service to the cause of Samskrita in bringing out this edition of Amara. His endeavour deserves full support and encouragement."

SRI M. LAKSHMINARASIMHAIAH, M.A.,
*Professor of Sanskrit, University of Mysore.*

"I am delighted to hear that Sri G. K. Thimmannachar, M.A., B.T., is editing and publishing Namalinganusasana of Amarasimha, a famous lexicon in Samskrit. I have had the pleasure of going through the first part of the work. It is edited with transliteration, and commentary in Kannada and copious notes in English. The commentary is worthy of the subject matter, precise and clear. The meanings, interpretations and explanations given to several words bring in a vast amount of knowledge drawn from varied sources."

"Sri Thimmannachar is a worthy son of a worthy father, Bramhasri late Vidvan Garani Vaiyakarana Krishnacharyar, a famous scholar in Samskrit and Kannada. The book edited by Sri Thimmannachar bears the stamp of a scholar who is both a ಸಹೃದಯ (sahridaya) and an ಆಚಾರ್ಯ (Acharya). He has done a great service to the people of the state by editing this famous book. The book may confidently be commended as a valuable guide for the study of Samskrit."

SRI M. P. L. SASTRY, M.A.,
*Member, Legislative Council, University Council and Senate, Board for Sanskrit Education & Examinations in Mysore.*

ಎಂ. ಎ. ಪದಭೂಷಿತೈಃ ಶ್ರೀಮತ್ಪಂಡಿತಶಿರೋಮಣಿ ಗರಣಿಕೃಷ್ಣಾಚಾರ್ಯಾತ್ಮಜೈಃ ಶ್ರೀಮದ್ಭಿಃ ತಿಮ್ಮಣ್ಣಾಚಾರ್ಯಾಭಿಧೈಃ ಮೈಸೂರುದೇಶೀಯಸಂಸ್ಕೃತಪಾಠಶಾಲಾ ವಿಶ್ರಾಂತಪರೀಕ್ಷಣಾಧಿಕಾರಿಭಿಃ ಮುದ್ರಾಪಿತಃ ಪ್ರೇಷಿತಃ ಗ್ರಂಥಃ ಅಮರಕೋಶಃ ಅಮರಸಿಂಹವಿರಚಿತಃ ಆಂತಂ ದೃಷ್ಟಃ ಮಯಾ ಪರಿಶೀಲಿತಶ್ಚ ಯಥಾಮನೀಷಂ. ಅಮರಕೋಶಃ ಸಂಹಿತಾರೂಪೇಣ ವರ್ತತ ಇತಿ ಪದಜ್ಞಾನಪದಚ್ಛೇದಪದಾರ್ಥಜ್ಞಾನಂ ಚ ನ ಜ್ಞಾಯತೇ. ಯದ್ಯಪಿ ಅಮರಸುಧಾ ಭಾನುಜಿದೀಕ್ಷಿತವಿರಚಿತಾ ವರ್ತತೇ ಅತಿ ಪ್ರೌಢತಯಾ. ಪ್ರಥಮಂ ಸಂಸ್ಕೃತಭಾಷಾಜಿಜ್ಞಾಸೂನಾಂ ನೋಪಯೋಗ ಇತಿ ಸುಬದ್ಧತಯಾ, ಪದಜ್ಞಾನಪದಚ್ಛೇದಪೂರ್ವಕಂ ಆಂಗ್ಲೇಯಭಾಷಯಾ ಅರ್ಥಪ್ರದರ್ಶನಂ ತತ್ರ ತತ್ರ ಸ್ಥಲವಿಶೇಷೇ ತತ್ತಚ್ಛಬ್ದಪ್ರವೃತ್ತಿನಿಮಿತ್ತಪ್ರದರ್ಶನಂ ಸುಬದ್ಧತಯಾ, ನ ಕುತ್ರಾಪಿ ನ ಕೈರ್ಮುದ್ರಾಪಿತ ಇತಿ ಅಪೂರ್ವೋಽಯಂ ಗ್ರಂಥಃ ಗ್ರಾಹಕೈಸ್ಸರ್ವೈರಪಿ ಸಂಗ್ರಹೀತವ್ಯ ಇತಿ ಆವೇದಯಿತಾ.

**ಪಂಡಿತರತ್ನಂ ಮಹಾವಿದ್ವಾನ್ ನೆರೂರು ಕೃಷ್ಣಾಚಾರ್ಯಃ**

ಮೈಸೂರು ಸಂಸ್ಥಾನ ಮಹಾಪಾಠಶಾಲಾವ್ಯಾಕರಣಪ್ರಧಾನಾಧ್ಯಾಪಕನಿವೃತ್ತಪದವೀಕಃ.

---

ಶಬ್ದರತ್ನಾವಳೀಪ್ರಭೃತಿಗ್ರಂಥನಿರ್ಮಾಣಾಲಂಕರ್ಮೀಣೇನ ವೈಯಾಕರಣತಲ್ಲಜ ಶ್ರೀ ಕೃಷ್ಣಾಚಾರ್ಯತನುಜನುಭಿಃ ಕಲ್ಯಾಣನಗರೀಸ್ಥಚಾಮರಾಜೇಂದ್ರ ಸಂಸ್ಕೃತಮಹಾಪಾಠಶಾಲಾಧ್ಯಕ್ಷಪದವೀಮಲಂಕೃತವದ್ಭಿಃ ದೇವನಾಗ್ಯಾಮಾಂಗ್ಲವಾಣ್ಯಾಂ ಚ ಕೃತಪರಿಶ್ರಮೈಃ ಶ್ರೀ ತಿಮ್ಮಣ್ಣಾಚಾರ್ಯಮಹೋದಯೈಃ ಪ್ರಕಟಿತಂ ಅಮರಕೋಶಾಭಿಧಾನಸ್ಯ ನಾಮಲಿಂಗಾನುಶಾಸನಸ್ಯಾದಿಮಂ ಕಾಂಡಂ ಪರ್ಯಶೀಲಯಂ. ಕಾಂಡತ್ರಯಾತ್ಮಕಮಿದಂ ಪೂರ್ಣಂ ಮುದ್ರಾಪಿತಪೂರ್ವಂ ಮಹೀಶೂರಸಂಸ್ಥಾನಪ್ರಧಾನವಿದ್ಯಾಧಿಕಾರಸ್ಥಿತೇನ ರೈಸ್‌ಮಹಾಶಯೇನ, ತತೋಽಸ್ಯಾತಿಶಯಾವಹೇಷು ಕೇಚನ ನಿರ್ದಿಶ್ಯಂತೇ. ಕರ್ಣಾಟಕಲಿಪ್ಯೇವ ದೇವನಾಗರೀಲಿಪ್ಯಾಪಿ ಮೂಲನಿವೇಶನಂ ಸಂದಿಗ್ಧಾಂತಾನಾಂ ಪದಾನಾಮಂತಪ್ರದರ್ಶನಂ ಯಥಾ ೬೫ ಪತ್ರೇ 'ಚಿತ್' ಶಬ್ದಸ್ಯ ತಕಾರಾಂತತಾಯಾಃ, 'ಸಂವಿತ್' ಶಬ್ದಸ್ಯ ದಕಾರಾಂತತಾಯಾಃ, ಅಪ್ರಸಿದ್ಧಾನಾಂ ಶಬ್ದಾನಾಂ ತತ್ತದ್ವಿಭಕ್ತಿಷು ರೂಪಭೇದಪ್ರಕಟನಂ, ಯಥಾ ೨೩ ಪತ್ರೇ 'ಹಾಹಾ' ಶಬ್ದಸ್ಯ ಕ್ವಚಿತ್ ಸೋದಾಹರಣಂ ಮೂಲಾರ್ಥವಿವರಣಂ, ಯಥಾ ೨೯ ಪತ್ರೇ 'ಕ್ಲೀಬೇ ಶೀಘ್ರಾದ್ಯಸತ್ವೇಸ್ಯಾತ್ ತ್ರಿಷ್ವೇಷಾಂ ಭೇದ್ಯಗಾಮಿಯತ್' ಇತ್ಯಸ್ಯ ಕ್ವಚಿನ್ಮೂಲೋಪಾತ್ತಪದಾರ್ಥವಿಶದೀಕರಣಂ, ಟಿಪ್ಪಣ್ಯಾ ಯಥಾ ೮೭ ಪತ್ರೇ ಶ್ರುತ್ಯಾದಿಶಬ್ದಾವಯವಾರ್ಥಸ್ಯ, ಪ್ರವಹ್ಲಿಕಾದಿಪದಾನಾಂ ಸೋದಾಹರಣಮರ್ಥಸ್ಯ ಚ ಪ್ರದರ್ಶನಂ, ೧೦೦ ಪತ್ರೇ ರಸಾದಿಸ್ವರೂಪನಿರೂಪಣಂ, ಇತ್ಯಾದಯೋಽತ್ರ ಸ್ಫುಟಾವಿಶೇಷಾಃ ಶಬ್ದಾರ್ಥೋನ್ಮೀಲನಂ ನ ಕೇವಲಯಾ ಕಾರ್ಣಾಟಕ್ಯಾ ಸುಲಭತಮಯಾ ಆಂಗ್ಲಭಾಷಯಾಪಿ ವ್ಯರಚಿ.

ಸ್ವಾತಂತ್ರ್ಯಪ್ರಾಪ್ತ್ಯನಂತರಂ ಭಾರತಜನತಾಯಾಂ ಗೀರ್ವಾಣಭಾಷಾಯಾಃ ಅಧ್ಯಯನಪ್ರಚಾರಣಾದೌ ಉತ್ಸಾಹೋಂಕುರಿತಃ. ಸ ಚ ಫಲೇಗ್ರಹಿರ್ಭೂಯಾದಿತ್ಯಭಿಜ್ಞಾ ಆಶೇರತೇ. ನಾಮಲಿಂಗಾನುಶಾಸನಸ್ಯಾಧ್ಯಯನಂ ತತ್ರ ಸುಬಹೂಪಕುರ್ಯಾತ್ ವಿವಿಧಗ್ರಂಥಾಧ್ಯಯನವಿವಶಮಾನಸಾನಾಂ ಛಾತ್ರಾಣಾಂ ಸಂಸ್ಕೃತಭಾಷಾಪ್ರಣಯಿನಾಂ ಇತರಭಾಷಾವಿದಾಂ ಚ ವಿನಾಯಾಸಂ ಶಬ್ದಸ್ವರೂಪಾದೀನಾಮವಗತೌ ಶ್ರೀ ತಿಮ್ಮಣ್ಣಾಚಾರ್ಯಾಣಾಮಯಂಪ್ರಯತ್ನಃ ಮಹತ್ ಸಾಹಾಯಕಮಾಚರತಿ. ಪ್ರಥಮಮಿವ ದ್ವಿತೀಯತೃತೀಯಾವಪಿ ಕಾಂಡೌ ಅನಯೈವ ಶೈಲ್ಯಾ ವಿನಾ ವಿಲಂಬಂ ಪ್ರಕಟೀಕೃತ್ಯ ಗೀರ್ವಾಣವಾಣೀ ಸಮಾಸ್ವಾದನಬದ್ಧಾದರಾಣಾಂ ಕರ್ಣಾಟಕಭಾಷಾಭಿಜ್ಞಾನಾಂ ಕೃತಜ್ಞತಾಭಾಜನಂ ಭೂಯಾಸುಃ ಶ್ರೀತಿಮ್ಮಣ್ಣಾಚಾರ್ಯಾ ಇತಿ ಸಪ್ರಮೋದಮಭಿಪ್ರೈಮಿ.

ವಿದುಷಾಂ ಅನುಚರಃ

ಪಂಡಿತರಾಜಃ ಆಸ್ಥಾನವಿದ್ವಾನ್

**ನೆ. ಸು. ರಾಮಚಂದ್ರಶಾಸ್ತ್ರೀ,**

ವೇದಾಂತಪ್ರಧಾನಾಧ್ಯಾಪಕಃ, ಭಾರತೀಯಗಿರ್ವಾಣ ಪ್ರೌಢವಿದ್ಯಾಭಿವರ್ಧಿನೀ-

ಪಾಠಶಾಲಾಧ್ಯಕ್ಷಶ್ಚ.

---

‘ಅಪರೋಕ್ಷಮಿದಂ ಸಮೇಷಾಂ ಯದಮರಸಿಂಹಪ್ರಣೀತೋ ನಾಮಲಿಂಗಾನುಶಾಸನಾಭಿಧಃ ಕೋಶಃ ಸಂಸ್ಕೃತಭಾಷಾಪರಿಚಯಪರಿಶ್ರಮಸಂಪಾದನೇ ಪ್ರಧಾನಂ ಸಾಧನಮಿತಿ. ಅಂತರೇಣ ಕೋಶಸ್ಯಾಸ್ಯ ಸಹಾಯಮಸಾಧ್ಯಂ ಕವಿವಚಸಾಮರ್ಥವಿಜ್ಞಾನಂ, ದುಃಶಕೋಸ್ಯಾಂ ಭಾಷಾಯಾಮಸ್ಖಲಿತೋ ವ್ಯವಹಾರಶ್ಚ. ಸತ್ಸ್ವಪಿ ಮುದ್ರಿತೇಷ್ವನೇಕೇಷು ಕೋಶಪುಸ್ತಕೇಷು ಸಂಸ್ಕೃತಭಾಷಾಲಿಪಿಪರಿಚಯರಹಿತಾನಾಮಪ್ಯುಪಯೋಗಾಯ ಸಂಸ್ಕೃತಕರ್ಣಾಟಕಲಿಪ್ಯೋರ್ಮುದ್ರಯಿತ್ವಾ ಸುಪರಿಷ್ಕೃತಯಾ ಸರಣ್ಯಾ ಕೋಶಸ್ಯ ಪ್ರಥಮಕಾಂಡಭಾಗಂ ಪ್ರಕಾಶಿತವತಾಂ ಶ್ರೀಮತಾಂ ಎಮ್.ಎ.,ಬಿ.ಟಿ. ಇತ್ಯುಪಾಧಿಭಾಜಾಂ ಜಿ. ಕೆ. ತಿಮ್ಮಣ್ಣಾಚಾರ್ಯಾಣಾಮುದ್ಯಮಃ ಕಾಮಮಭಿನಂದನೀಯಃ. ಸಂಸ್ಕೃತಭಾಷಾಭ್ಯಾಸಕುತೂಹಲಿನಾಂ ಸುಖಬೋಧಾಯ ಪ್ರತಿಪದಂ ಆಂಗ್ಲಕರ್ಣಾಟಕಭಾಷಾಭ್ಯಾಮರ್ಥವಿವರಣೇನ, ತತ್ರ ಕ್ಲಿಷ್ಟಾನಾಂ ಶಬ್ದಾನಾಂ ಸ್ವರೂಪಪ್ರತಿಪಾದನೇನ, ಲಿಂಗಸೂಚನಾಯ ಚಿಹ್ನವಿಧಾನೇನ ಚ ಬಾಲಾನಾಂ ಸೌಲಭ್ಯಂ ಕಲ್ಪಯದ್ಭಿಃ ಅಧ್ಯಾಪಕಾನಾಂ ಕ್ಲೇಶಂ ಚ ಶಿಥಿಲಯದ್ಭಿಃ ಪ್ರಕಾಶಕೈರೇತೈಃ ನೂನಂ ಬಹೂಪಕೃತೋ ವಿದ್ಯಾಪ್ರಣಯಿಲೋಕಃ. ಆಂಗ್ಲಕರ್ಣಾಟಕಭಾಷಾಮಾತ್ರಪರಿಚಯವಾನಪಿ ಪುಸ್ತಕಸ್ಯಾಸ್ಯ ಸಹಾಯೇನ ಸಂಸ್ಕೃತಭಾಷಾಯಾಂ ಪರಿಶ್ರಮಂ ಸಂಪಾದಯಿತುಂ ಕವಿವಚಸಾಮಭಿಪ್ರಾಯಂ ಸಮ್ಯಗ್ವೇದಿತುಂ, ಅಸ್ಖಲಿತಂ ಶಬ್ದರೂಪಾಣಿ ಪ್ರಯೋಕ್ತುಂ ಚ ಪ್ರಭವತೀತ್ಯತ್ರ ನ ಕೋಪಿ ಸಂಶಯಃ. ರಮಣೀಯಾನಿ ಪತ್ರಾಣಿ ಕಮನೀಯಾನ್ಯಕ್ಷರಮುದ್ರಣಾನಿ ನಿರವದ್ಯಾ ಚ ಪರಿಷ್ಕರಣರೀತಿರತ್ರಪುಸ್ತಕ ಇತಿ ಮಹಾನುತ್ಸಾಹೋ ಗ್ರಾಹಕಜನಸ್ಯ.

ಶಬ್ದರತ್ನಾವಲೀಃ, ಧಾತುರೂಪಾವಲಿಶ್ಚೇತಿ ಪುಸ್ತಕಸ್ಯ ಪ್ರಕಾಶನೇನ ಬಹೂಪಕೃತವತಾಂ ವೈಯಾಕರಣವಿದುಷಾಮಾಸ್ಥಾನಮಹಾವಿದ್ವಾನಿತಿ ಬಿರುದಭಾಜಾಂ ಶ್ರೀಮತಾಂ .ಗರಣಿಕೃಷ್ಣಾಚಾರ್ಯಾಣಾಂ ತನೂಜನ್ಮನಾಮೇಷಾಂ ಕೋಶಪ್ರಕಾಶಕಾನಾಮುಪಕೃತ್ಯುದ್ಯಮಃ ಕುಲಕ್ರಮಾಗತಂಸ ಹಜನ್ಮಾನಂ ಸಂಸ್ಕೃತಭಾಷಾವೃದ್ಧಿಪ್ರಣಯಮಭಿವ್ಯನಕ್ತಿ. ಏವಮೇವ ಅವಶಿಷ್ಟಸ್ಯ ಕಾಂಡದ್ವಯಸ್ಯಾಚಿರಾತ್ ಪ್ರಕಾಶಃ ಪ್ರಕಾಶಕೈರೇತೈಃ ವಿಧೀಯತ ಇತಿ ವಿಶ್ವಸಿಮಿ. ಅಧ್ಯೇತೄಣಾಮಧ್ಯಾಪಕಾನಾಂ ಚ ಉಪಕಾರಕಸ್ಯಾಸ್ಯ ಪುಸ್ತಕಸ್ಯ ಪಾಠಶಾಲಾಸು ಪಠ್ಯಪುಸ್ತಕತ್ವೇನ ಪರಿಗ್ರಹಃ ಆವಶ್ಯಕ ಇತಿ ಪ್ರತ್ಯೇಮಿ.

**ಮ. ಸೋ. ತಿರುನಾರಣಯ್ಯಂಗಾರ್,**

ವ್ಯಾಕರಣತರ್ಕವಿದ್ವಾನ್ ಆಸ್ಥಾನವಿದ್ವಾನ್ ವಿಶ್ರಾಂತವ್ಯಾಕರಣಪ್ರಧಾನಾಧ್ಯಾಪಕಃ
ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲಾ, ಬೆಂಗಳೂರು.

---

ಇಹ ಖಲು ಶಬ್ದಕೋಶಃ ಸಂಸ್ಕೃತವಾಣೀಮಧಿಜಿಗಾಂಸಮಾನಾನಾಂ ಛಾತ್ರಾಣಾಂ ನೌರಿವ ಮಹಾನದೀಂ ತಿತೀರ್ಷೂಣಾಂ ಮಹತ್ ಸಾಹಾಯ್ಯಮಾಚರಯತಿ. ನ ಕೇವಲಂ ಛಾತ್ರಾಣಾಂ, ವಿದುಷಾಮಪಿ ಕಾವ್ಯನಿರ್ಮಾಣವ್ಯಾಖ್ಯಾನಪ್ರಣಯನಾದಿಷು ವಿನಾ ಶಬ್ದಕೋಶಂ ಹಸ್ತಾವಲಂಬಂ ಕಥಂ ವಾ ಗತಿಃ ಕುಂಠಿತಾ ನ ಭವೇತ್? ವಿಶ್ವಮೇದಿನ್ಯಾದಿಷು ಕೋಶಗ್ರಂಥೇಷು ಸತ್ಸ್ವಪಿ, ನಾಮಲಿಂಗಾನುಶಾಸನನಾಮಾಯಂ ಶಬ್ದಕೋಶಃ ಸರ್ವೈರಪಿ ಸಂಸ್ಕೃತಪ್ರಣಯಿಭಿಃ ಬಾಲೈಃ ವೃದ್ಧೈಶ್ಚ ಚಿರಾತ್ ಕಂಠಸ್ಥೀಕ್ರಿಯಮಾಣಃ ಸ್ವಸ್ಯ ಮೂರ್ಧನ್ಯತ್ವಂ ಬಹೂಪಯುಕ್ತತ್ವಂ ಚ ಸ್ಫುಟಮಾವಿಷ್ಕರೋತಿ. ಮಲ್ಲಿನಾಥಾದಿಭಿಶ್ಚ ಮಹಾಸೂರಿಭಿರಸ್ಯ ಪ್ರಾಮಾಣ್ಯಂ ಸ್ಪಷ್ಟಮಂಗೀಕೃತಂ. ತ್ರಿಕಾಂಡಾತ್ಮಕಸ್ಯ ಚಾಸ್ಯ ಕೋಶಸ್ಯ ಪ್ರಥಮಕಾಂಡಮಿದಾನೀಂ ಶ್ರೀಮದ್ಭಿಃ ಜಿ. ಕೆ. ತಿಮ್ಮಣ್ಣಾಚಾರ್ಯಮಹೋದಯೈಃ ಎಂ.ಎ., ಬಿ.ಟಿ. ಬಿರುದಾಂಕಿತೈಃ ಸಂಸ್ಕೃತಭಾಷಾಯಾಂ ಕೃತಭೂರಿಪರಿಶ್ರಮೈಃ ಸಂಮುದ್ರ್ಯ ಪ್ರಾಕಾಶ್ಯಮನಾಯಿ. ಬಾಲಾನಾಂ ಸುಖಬೋಧಾಯ ಮುದ್ರಾಪಿತೇಽಸ್ಮಿನ್ ಗ್ರಂಥೇ ವರ್ಣವಿನ್ಯಾಸಃ ಸುಖೇನ ಚಾಕ್ಷುಷೋ ಭವತಿ. ಛಾತ್ರಾಣಾಂ ಸುಖಪಾಠಾಯ ಕರ್ಣಾಟಕಲಿಪ್ಯಾ ಸರ್ವೇ ಶ್ಲೋಕಾ ಅನೂದಿತಾಃ. ಪದವಿಭಾಗಾದಿಕಂ ಸಮ್ಯಕ್ ಪ್ರದರ್ಶಿತಮ್. ವ್ಯಾಕರಣಸಂಬಂಧಿನೋಽಪಿ ವಿಷಯಾಃ ಸಂಕ್ಷೇಪೇಣನಿರೂಪಿತಾಃ. ಅಮರಸುಧಾದಿವ್ಯಾಖ್ಯಾನಾನಿ ಪರಿಶೀಲ್ಯ ಸಂಯೋಜಿತಾಃ ಟಿಪ್ಪಣ್ಯಃ ಗ್ರಂಥಸ್ಯಾಸ್ಯ ಉಪಯುಕ್ತತಾಂ ವರ್ಧಯಂತಿ. ಏವಂ ರೀತ್ಯಾ ಪರಿಷ್ಕೃತಸ್ಯ ಅಮರಕೋಶಸ್ಯಆವಶ್ಯಕತಾ ಚಿರಾದಾಸೀತ್. ಏತಾಮಾವಶ್ಯಕತಾಂ ಪೂರಯಂತಃ ಮಹೋದಯಾ ಇಮೇ ಸಮೇಷಾಂ ಗೀರ್ವಾಣವಾಣೀಪ್ರಣಯಿನಾಮಭಿನಂದನಾನ್ಯರ್ಹಂತಿ. ಗ್ರಂಥೋಽಯಂ ಸಾದರಮಶೇಷೈರಪಿ ವಿಶೇಷದರ್ಶಿಭಿರ್ಜನೈಃ ಸಂಗೃಹ್ಯತೇಇತ್ಯಸ್ತಿ ಮೇ ದೃಢೋ ವಿಶ್ವಾಸಃ.

**ಸಾಹಿತ್ಯ-ವ್ಯಾಕರಣವಿದ್ವಾನ್, ಕನ್ನಡವಿದ್ವಾನ್**

**ಶ್ರೀ ನಡಹಳ್ಳಿ ರಂಗನಾಥಶರ್ಮಾ,**

ವ್ಯಾಕರಣೋಪಪ್ರಾಧ್ಯಾಪಕಃ, ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲಾ,
ಬೆಂಗಳೂರು.

